

ಕನ್ನಡ ವಿಶ್ವವಿದ್ಯಾಲಯ, ಹಂಪಿ

# "ಆಧುನಿಕ ಕವಯತ್ರಿಯರ ಕವನಗಳಲ್ಲಿ ಅಕ್ಕಮಹಾದೇವಿ"

ಕನ್ನಡ ಎಂ.ಫಿಲ್ ಪದವಿಗಾಗಿ ಕಾವ್ಯಮಂಡಲದ ವತಿಯಿಂದ
ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಅರ್ಪಿಸಿದ ನಿಬಂಧ

ಮಾರ್ಗದರ್ಶಕರು
ಡಾ. ಡಿ. ಮಂಗಳಾ ಶ್ರೀಧರ್
ಎಂ.ಎ. ಎಂ.ಫಿಲ್. ಪಿಹೆಚ್.ಡಿ.

ಸಂಶೋಧನಾ ವಿದ್ಯಾರ್ಥಿ
ಚಿಕ್ಕಣ್ಣ ಎಂ.
ಎಂ.ಎ. ಬಿ.ಇಡಿ., ಪಿ.ಜಿ.ಡಿ.ಸಿ.ಎ.,



ಹಂಪಿ ಕನ್ನಡ ವಿಶ್ವವಿದ್ಯಾಲಯದ
ಕಾವ್ಯಮಂಡಲ
೧೩/೮೫, ರಾಷ್ಟ್ರೀಯ ವಿದ್ಯಾಲಯ ರಸ್ತೆ
ಬಸವನಗುಡಿ, ಬೆಂಗಳೂರು-೦೪.

2008

# "ಆಧುನಿಕ ಕವಯತ್ರಿಯರ ಕವನಗಳಲ್ಲಿ ಅಕ್ಕಮಹಾದೇವಿ"

ಕನ್ನಡ ಎಂ.ಫಿಲ್ ಪದವಿಗಾಗಿ
ಕಾವ್ಯ ಮಂಡಲದ ವತಿಯಿಂದ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಅರ್ಪಿಸಿದ ನಿಬಂಧ
2007–2008

ಸಂಶೋಧನಾ ವಿದ್ಯಾರ್ಥಿ

**ಚಿಕ್ಕಣ್ಣ ಎಂ**

ಎಂ.ಎ, ಬಿ.ಇಡಿ, ಪಿ.ಜಿ.ಡಿ.ಸಿ.ಎ.,

ಮಾರ್ಗದರ್ಶಕರು
ಡಾ. ಮಂಗಳಾ ಶ್ರೀಧರ್
ಎಂ.ಎ, ಎಂ.ಫಿಲ್, ಪಿ.ಎಚ್‌ಡಿ.,



ಹಂಪಿ ಕನ್ನಡ ವಿಶ್ವವಿದ್ಯಾಲಯದ
"ಕಾವ್ಯ ಮಂಡಲ"
೧೩/೮೫, ರಾಷ್ಟ್ರೀಯ ವಿದ್ಯಾಲಯ ರಸ್ತೆ, ಬಸವನಗುಡಿ
ಬೆಂಗಳೂರು – 560 004

# ಮಾರ್ಗದರ್ಶಕರ ಪ್ರಮಾಣ ಪತ್ರ

ಚಿಕ್ಕಣ್ಣ ಎಂ ಅವರು ನನ್ನ ಮಾರ್ಗದರ್ಶನದಲ್ಲಿ "ಆಧುನಿಕ ಕವಯತ್ರಿಯರ ಕವನಗಳಲ್ಲಿ ಅಕ್ಕಮಹಾದೇವಿ" ಎಂಬ ವಿಷಯವನ್ನು ಕುರಿತ ನಿಬಂಧವನ್ನು ಹಂಪಿ ಕನ್ನಡ ವಿಶ್ವವಿದ್ಯಾಲಯದ ಕನ್ನಡ ಎಂ.ಫಿಲ್ ಪದವಿಗಾಗಿ ಸಿದ್ಧಪಡಿಸಿದ್ದು, ಅವರು ಈ ನಿಬಂಧವನ್ನು ಬೇರೆ ಯಾವುದೇ ವಿಶ್ವವಿದ್ಯಾಲಯದ ಪದವಿ ಪರೀಕ್ಷೆಗಾಗಲಿ ಅಥವಾ ವೈಯಕ್ತಿಕ ವಿಷಯಗಳಿಗಾಗಲಿ ಬಳಸಿಕೊಂಡಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಬಿ.ಎಂ. ಮಂಗಳ

ಡಾ॥ ಮಂಗಳಾ ಶ್ರೀಧರ್

ಎಂ.ಎ, ಎಂ.ಫಿಲ್, ಪಿ.ಎಚ್‌ಡಿ.,

ಹಂಪಿ ಕನ್ನಡ ವಿಶ್ವವಿದ್ಯಾಲಯದ

"ಕಾವ್ಯಮಂಡಲ"

೧೩/೮೫, ರಾಷ್ಟ್ರೀಯ ವಿದ್ಯಾಲಯ ರಸ್ತೆ,

ಬಸವನಗುಡಿ, ಬೆಂಗಳೂರು – 560 004

ಸ್ಥಳ : ಬೆಂಗಳೂರು

ದಿನಾಂಕ : ೧೫/೦೯/೨೦೦೮

# ವಿದ್ಯಾರ್ಥಿಯ ಪ್ರಮಾಣ ಪತ್ರ

"ಆಧುನಿಕ ಕವಯತ್ರಿಯರ ಕವನಗಳಲ್ಲಿ ಅಕ್ಕಮಹಾದೇವಿ" ಎಂಬ ವಿಷಯವನ್ನು ಕುರಿತು ಹಂಪಿ ವಿಶ್ವವಿದ್ಯಾಲಯ 'ಕಾವ್ಯಮಂಡಲ'ದ ಕನ್ನಡ ಎಂ.ಫಿಲ್ ಪದವಿ ಪರೀಕ್ಷೆಗೆ ಡಾ. ಮಂಗಳಾ ಶ್ರೀಧರ್ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ ಈ ನಿಬಂಧವನ್ನು ನಾನು ಹಿಂದೆ ಯಾವುದೇ ವಿಶ್ವವಿದ್ಯಾಲಯದ ಪದವಿ ಪರೀಕ್ಷೆಗಾಗಲೀ ಅಥವಾ ನನ್ನ ವೈಯಕ್ತಿಕ ಉದ್ದೇಶಗಳಿಗಾಗಲೀ ಎಲ್ಲಿಯೂ ಬಳಸಿಕೊಂಡಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

**ಚಿಕ್ಕಣ್ಣ ಎಂ**
ಎಂ.ಫಿಲ್ ವಿದ್ಯಾರ್ಥಿ

ಹಂಪಿ ಕನ್ನಡ ವಿಶ್ವವಿದ್ಯಾಲಯದ
"ಕಾವ್ಯಮಂಡಲ"
೧೩/೮೫, ರಾಷ್ಟ್ರೀಯ ವಿದ್ಯಾಲಯ ರಸ್ತೆ,
ಬಸವನಗುಡಿ, ಬೆಂಗಳೂರು – 560 004

ಸ್ಥಳ : ಬೆಂಗಳೂರು
ದಿನಾಂಕ : ೧೫/೦೯/೨೦೦೮

## ಕೃತಜ್ಞತೆಗಳು

ಪ್ರಸ್ತುತ ನಿಬಂಧವನ್ನು ಸಿದ್ಧಪಡಿಸುವಲ್ಲಿ ಮಾರ್ಗದರ್ಶನ ನೀಡಲು ಸಂತೋಷದಿಂದ ಒಪ್ಪಿಕೊಂಡು ಸೂಕ್ತಮಾರ್ಗದರ್ಶನ ಹಾಗೂ ಪ್ರೋತ್ಸಾಹ ನೀಡಿದ ಪೂಜ್ಯ ಗುರುಗಳಾದ ಡಾ॥ ಮಂಗಳಾ ಶ್ರೀಧರ್ ಅವರಿಗೆ ಕೃತಜ್ಞತೆಗಳು.

ಎಂ.ಫಿಲ್ ಪದವಿ ವ್ಯಾಸಂಗಕ್ಕೆ ಹಂಪಿ ಕನ್ನಡ ವಿಶ್ವವಿದ್ಯಾಲಯದ ಕಾವ್ಯಮಂಡಲದಲ್ಲಿ ಅವಕಾಶ ನೀಡಿ ಸಹಕರಿಸಿದ ಅಧ್ಯಯನ ಕೇಂದ್ರದ ನಿರ್ದೇಶಕರಾದ ಪ್ರೊ ॥ ಕಿ.ರಂ. ನಾಗರಾಜ್ ಅವರಿಗೆ ಹಾಗೂ ನಿಬಂಧದ ಬಗ್ಗೆ ಆಗಾಗ ಉಪಯುಕ್ತ ಸಲಹೆಗಳನ್ನು ನೀಡಿದ ಪೂಜ್ಯ ಗುರುಗಳಾದ ಡಾ॥ ರಾಮೇಗೌಡ ಅವರಿಗೂ ನನ್ನ ಕೃತಜ್ಞತೆಗಳು. ಈ ಪ್ರಬಂಧದ ವಿಷಯದ ಬಗ್ಗೆ ಮಾಹಿತಿಯನ್ನು ನೀಡಿದ ಕಲ್ಗುಡಿ ಸಾರ್, ನಟರಾಜ್ ಹುಳಿಯಾರ್, ಆಶಾಮೇಡಂ, ಡಾ. ಮಂಗಳಾ ಪ್ರಿಯದರ್ಶಿನಿ ಹಾಗೂ ಶಿವಾರೆಡ್ಡಿ ಸಾರ್ ರವರಿಗೂ ನನ್ನ ಕೃತಜ್ಞತೆಗಳು

ಎಂ.ಫಿಲ್ ತರಗತಿಗೆ ಸೇರಲು ಸಹಾಯ ಮಾಡಿದ ಕೆ.ಕೆ.ಎಂ.ಸಿ. ಮಾಲೀಕರಾದ ಶ್ರೀಮತಿ ಶ್ರೀ ಶಾಂತನಾರಾಯಣ್ ಹಾಗು ಮ್ಯಾನೇಜರ್ ರಾಮಸ್ವಾಮಿ, ಚಂದ್ರಶೇಖರ್ ನೆಲವಿಗಿ ರವರಿಗೂ ಅಧ್ಯಯನದ ಸಮಯದಲ್ಲಿ ಮನೋಸ್ಥೈರ್ಯ ನೀಡಿದ ನನ್ನ ಅಣ್ಣ ಮಾರಪ್ಪ, ಸುಶೀಲಮ್ಮ ನನ್ನ ಗೆಳತಿ ಶ್ವೇತ ಎ ರವರಿಗೂ ನಾನು ಚಿರರುಣಿ.

ಅಧ್ಯಯನದ ಅವಧಿಯಲ್ಲಿ ಸಹಕರಿಸಿದ ಗೆಳೆಯರಾದ ಸಿ.ಎಸ್. ರಮೇಶ್, ಹನುಮೇನಾಯ್ಕ, ಸುರೇಶ್ ಎಂ ತಂಗಿ ಪ್ರಮೀಳರವರಿಗೂ ಪ್ರಬಂಧವನ್ನು ಅಂದವಾಗಿ ಮುದ್ರಿಸಿದ ಕನ್ನಡ ಗಣಕ ಪರಿಷತ್ತಿನ ಸಿಬ್ಬಂದಿವರ್ಗದವರಿಗೂ ನನ್ನ ಕೃತಜ್ಞತೆಗಳು.

ಚಿಕ್ಕಣ್ಣ ಎಂ

# ಪರಿವಿಡಿ

ಅಕ್ಕಮಹಾದೇವಿ 'ಸಮಕಾಲೀನ ಪ್ರಸ್ತುತತೆಯ ಹಿನ್ನೆಲೆಯಲ್ಲಿ ಬಹು ಮುಖ್ಯಳಾಗುತ್ತಾಳೆ. ಅಕ್ಕಮಹಾದೇವಿ ವಿಭಿನ್ನವಾಗಿ, ವಿಶೇಷವಾಗಿ, ಅನನ್ಯವಾಗಿ ಪರಿಗಣಿತವಾಗಲು, ಅವಳ ವೈಯಕ್ತಿಕ ಬದುಕಿನ ಸಂಗತಿಗಳು ಮತ್ತು ಆ ಸಂಗತಿಗಳ ಮೂಲಕವೇ ರೂಪುಗೊಳ್ಳುತ್ತಾ ಹೋದ ಅನುಭಾವಿಕ ವ್ಯಕ್ತಿತ್ವವೇ ಕಾರಣವಾಗಿದೆ. ಭಕ್ತಿ ಪಂಥದ ಮಹಾನ್ ಸಾಧಕಿಯಾಗಿ, ಅನುಭಾವದ ಮೇರುಗಿರಿಯಾಗಿ ಆಧುನಿಕ ಸ್ತ್ರೀ ಚಿಂತನೆಯ ನೆಲೆಯಲ್ಲಿ, ಸ್ತ್ರೀ ಸ್ವಾತಂತ್ರ್ಯಕ್ಕೊಂದು ರೂಪಕವಾಗಿ ಕಾಣಿಸಿಕೊಳ್ಳುತ್ತಾಳೆ. ಸ್ತ್ರೀವಾದಿ ಚಿಂತನೆಯ ಲೇಖಕಿಯರು ಅಕ್ಕಮಹಾದೇವಿಯನ್ನು ಪ್ರಸ್ತಾಪಿಸದೆ ಸ್ತ್ರೀ ಸ್ವಾತಂತ್ರ್ಯದ ಬಗ್ಗೆ ಮುಂದುವರೆಯುವುದಿಲ್ಲ. ಆದರೆ ಅವಳು ವೈಯಕ್ತಿಕವಾಗಿ ತೋರಿದ ದಿಟ್ಟತನ. ಪ್ರತಿಭಟನೆಗಳು, ಸ್ತ್ರೀ ಸಮುದಾಯಕ್ಕೆ ಮಾದರಿಯಾಗಿ ಉಳಿಯಬೇಕೆಂಬ ಆಲೋಚನೆ, ಉದ್ದೇಶಗಳನ್ನು ಹಿನ್ನಲೆಯಲ್ಲಿ ಹೊಂದಿದ್ದವೇ ಎಂಬ ಪ್ರಶ್ನೆ ಎದುರಾಗುತ್ತದೆ. ಪುರುಷ ಶೋಷಿತವಾದ ಸಾಮಾಜಿಕ ಪರಿಸರದಲ್ಲಿ ಹೆಣ್ಣಿಗೆ ಯಾವುದೇ ಬಗೆಯ ಸ್ವಾತಂತ್ರ್ಯ, ಸಮಾನತೆಗಳು ಇರಲು ಸಾಧ್ಯವಿರಲಿಲ್ಲ. ಎನ್ನುವ ಸತ್ಯದ ಅರಿವು ಪ್ರತಿಯೊಬ್ಬ ಮಹಿಳೆಗೂ ಸಹಜವಾಗಿಯೇ ಇತ್ತಾದರೂ, ಇಲ್ಲದ ಸ್ವಾತಂತ್ರ್ಯ, ಸಮಾನತೆಗಾಗಿ ಹೋರಾಡಬೇಕೆಂಬ ಪ್ರಜ್ಞೆ ಅವರಲ್ಲಿ ಇನ್ನೂ ಜಾಗೃತವಾಗಿರಲಿಲ್ಲವಾದ ಕಾರಣ ಕುಟುಂಬ, ಸಮಾಜದ ಕಟ್ಟುಪಾಡುಗಳಿಗೆ ಬದ್ಧರಾಗಿ ಬಾಳುವುದರೊಂದಿಗೆ ರಾಜಿ ಮಾಡಿಕೊಂಡಿದ್ದರು. ಸೀಮಿತ ಕೌಟುಂಬಿಕ ಜಗತ್ತಿನ ವ್ಯಾಪ್ತಿಯೊಳಗೇ. ತಂದೆ, ತಾಯಿ, ಅಣ್ಣ, ತಮ್ಮ, ಅಕ್ಕ, ತಂಗಿ, ಗಂಡ – ಹೆಂಡತಿ, ಇತ್ಯಾದಿ ಸಂಬಂಧಗಳ ನಿವಾರಣೆಯಲ್ಲಿಯೇ, ತಾಯಿ, ಅಕ್ಕ – ತಂಗಿ, ಹೆಂಡತಿ, ಅತ್ತಿಗೆ, ನಾದಿನಿ ಅತ್ತೆ ಪಾತ್ರಗಳಲ್ಲಿಯೇ ಕರ್ತವ್ಯ ನಿರ್ವಹಿಸುತ್ತಾ, ಸುಖ – ಶಾಂತಿಗಳ ಸೃಷ್ಟಿಗೆ ಸೆಣಸುವುದನ್ನು ರೂಢಿಮಾಡಿಕೊಂಡಿದ್ದ ಕಾಲದಲ್ಲಿ ಅಕ್ಕಮಹಾದೇವಿ ಸ್ತ್ರೀ ಜನ್ಮದ ಅಸಹಾಯಕತೆ, ಶೋಷಣೆ ಇತ್ಯಾದಿಗಳ ಬಗ್ಗೆ ಯೋಚಿಸಿದಳಲ್ಲಾ ? ಅವಳಿಗೆ ಹೆಣ್ಣಿನ ಅಸಹಾಯಕತೆ ಪ್ರಪಂಚದ ಬವಣೆಗಳ ಅಂತರ್ಗತ ಭಾಗವೇ ಹೊರತು ಪ್ರತ್ಯೇಕ ಸಮಸ್ಯೆ ಎನಿಸಿರಲಿಲ್ಲ. ಆದ್ದರಿಂದ ಅವಳ ವಿರೋಧ. ಪ್ರತಿಭಟನೆ ಆರಂಭವಾದದ್ದು, ಭಕ್ತಿ ಸಾಧನೆಗೆ, ಅನುಭಾವಕ್ಕೆ ಅಡ್ಡಿಯಾಗುವ ಸಂಗತಿಗಳು ಹುಟ್ಟಿಕೊಂಡಾಗ, 'ಘಟನೆಗಳು ಘಟಿಸಿದಾಗ' ಎಳೆತನದಿಂದಲೇ ತಾನು ಕಲ್ಪಿಸಿಕೊಂಡು ಒಲಿದ ಚೆನ್ನಮಲ್ಲಿಕಾರ್ಜುನನ ಸಾಂಗತ್ಯಕ್ಕೆ ಬಾಧಕವಾದಾಗ, ಸೆಟೆಯ ನಿಲ್ಲುವ, ಪ್ರತಿಭಟಿಸುವ ವಿರೋಧಿಸುವ ಮನೋಧರ್ಮ ಅನಿವಾರ್ಯವಾಗುತ್ತದೆ.

ಬಸವಣ್ಣ, ಅಲ್ಲಮಪ್ರಭು ಮೊದಲಾದವರ ಬಗ್ಗೆ ಕೇಳಿ ತಿಳಿದಿರುವ ಸಾಧ್ಯತೆ ಇದ್ದರೂ, ಸ್ತ್ರೀಪರವಾದ ಅವರ ನಿಲುವುಗಳಿಗೆ ಪ್ರತ್ಯೇಕವಾದ ಮಾನ್ಯತೆ ಕೊಟ್ಟಿರುವ ಸಾಧ್ಯತೆಗಳಿಲ್ಲ. ಜೀವವನ್ನು ಸುತ್ತಿರುವ ಎಲ್ಲಾ ಮೋಹ, ಮಾಯೆ, ಕ್ರೋಧ, ಕಾಮಾದಿ ಆಭರಣಗಳನ್ನು ಕಿತ್ತೊಗೆದು, ವಾಸ್ತವ ಜಗತ್ತಿನಲ್ಲಿ ಬದುಕುತ್ತಿದ್ದು, ವಾಸ್ತವಾತೀತ ಅಥವಾ ಕಲ್ಪನೆಯ ಜಗತ್ತು, ಸಂಬಂಧಗಳೊಂದಿಗೆ ತನ್ನನ್ನು ಸಮೀಕರಿಸಿಕೊಳ್ಳುವ ಪ್ರಯತ್ನದಲ್ಲಿ ತಾರ್ಕಿಕ ಸಂಬಂಧಗಳನ್ನು, ವೈವಾಹಿಕ ವ್ಯವಸ್ಥೆಯನ್ನು ನಿರಾಕರಿಸುತ್ತಾಳೆ. ನಿರ್ಲಕ್ಷಿಸುತ್ತಾಳೆ. ಅಲೌಕಿಕ ಗಂಡನಾದ

ಚೆನ್ನಮಲ್ಲಿಕಾರ್ಜುನನ್ನು ಸಂಪೂರ್ಣವಾಗಿ ತನ್ನ ಗಂಡನಾಗಿ ಒಪ್ಪಿಕೊಂಡ ಮನಸ್ಸಿಗೆ, ಲೌಕಿಕದ ನೆಲೆಯಲ್ಲಿಯೂ ಒಬ್ಬ ಗಂಡನನ್ನು ಒಪ್ಪಿಕೊಂಡು ಬಾಳುವುದು ಇಬ್ಬಗೆತನದ ಸಂಕಟಗಳಿಗೆ ದಾರಿ ಮಾಡುವಂತಾಗುತ್ತದೆ. ಅದನ್ನು ಒಲ್ಲದ ಮನಸ್ಸು ಸ್ವೇಚ್ಛೆಯಿಂದ, ಅಬಾಧಿತವಾಗಿ ಆಧ್ಯಾತ್ಮ ಅನುಭಾವದ ಹಾದಿಗಳಲ್ಲಿ ಒಂಟಿಸಲಗದಂತೆ ಸಂಕೋಲೆಗಳಿಂದ ಮುಕ್ತಗೊಳಿಸಿಕೊಂಡು ಹೊರಟು ಬಿಡುತ್ತದೆ.

ಆದರೆ ಇಂತಹ ನಿಲುವಿನಲ್ಲಿ ವಿಶೇಷತೆಯನ್ನು ಗುರುತಿಸುವುದು ಅಕ್ಕಮಹಾದೇವಿ ಹೆಣ್ಣಾಗಿದ್ದುದರಿಂದ ಪುರುಷ ಸಾಧಕನಿಗೆ ತೊಟ್ಟ ಬಟ್ಟೆಯಲ್ಲಿ, ಬಿಟ್ಟ ಮಂಡೆಯಲ್ಲಿ, ಕೆಲವೊಮ್ಮೆ ನಿರ್ವಾಣದಲ್ಲಿ ಇದ್ದಕ್ಕಿದ್ದಂತೆ ಎದ್ದು ಹೊರಡುವುದು. ಹೊರಟು ಹೋಗುವುದು ಯಾವುದೇ ಕಾಲದ ಸಮಾಜಕ್ಕೆ ಆಘಾತಕಾರಿಯೂ ಅಲ್ಲ ; ಬೆರಗಿನ ಸಂಗತಿಯೂ ಅಲ್ಲ. ಆದರೆ ಹೆಣ್ಣೊಬ್ಬಳು ಮನೆ ಕುಟುಂಬದ ಎಲ್ಲೆಗಳನ್ನು ಅತಿಕ್ರಮಿಸಿ, ಎಲ್ಲ ಸಂಬಂಧಗಳನ್ನೂ ಧಿಕ್ಕರಿಸಿ, ಹೆಣ್ಣಾದರೂ ದೇಹದ ಹಂಗಿಲ್ಲದೆ, ಸಮಾಜ ದೃಷ್ಟಿಯಿಂದ ಶೀಲ, ಅಶ್ಲೀಲಗಳ ಪರಿವೆಯಿಲ್ಲದೆ, ನಿಂತ ನೆಲೆಯಿಂದಲೇ ನಿರ್ವಾಣ ಸ್ಥಿತಿಯನ್ನು ಅಪ್ಪಿಕೊಂಡು, ತಾನೊಲಿದ ಅಲೌಕಿಕ ಪುರುಷನನ್ನು ಅನ್ವೇಷಿಸುತ್ತಾ ಹೊರಟದ್ದು ಮಾತ್ರ ಜಾಗತಿಕ ಚರಿತ್ರೆಯಲ್ಲಿಯೇ ಅದ್ಭುತವೂ, ಅನನ್ಯವೂ ಆದ ಘಟನೆಯಾಗಿದೆ. ಆಧುನಿಕ ಸ್ತ್ರೀವಾದಿ ಚಳುವಳಿಯ ಪೂರ್ವಭಾವಿಯಾಗಿ, ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಪುರುಷ ಸಮಾಜದ ಬಗ್ಗೆ ತಮಗಿದ್ದ ಆಕ್ರೋಶವನ್ನು, ಪ್ರತಿಭಟನೆಯನ್ನು ಸಂಪೂರ್ಣವಾಗಿ ತಮ್ಮನ್ನು ಬೆತ್ತಲುಗೊಳಿಸಿಕೊಳ್ಳುವುದರ ಮೂಲಕ ವ್ಯಕ್ತಪಡಿಸಿದರಾದರೂ ಅದು ಮೆಚ್ಚುಗೆಯ ಮಾತಾಗುವುದಕ್ಕಿಂತಲೂ ಹುಚ್ಚುತನದ ಪರಮಾವಧಿ ಎನಿಸಿದೆ. ಒಂದು ಬಗೆಯ ವಿಕೃತ ಮನೋಭಾವ. ಅದಾಗಿದೆ. ಆದರೆ ಅಕ್ಕನ ನಿರ್ವಾಣದ ಹಿಂದೆ ಒಂದು ಬಲವಾದ ಆಧ್ಯಾತ್ಮಿಕದ, ಅನುಭಾವದ ಸಮರ್ಥನೆಯಿದೆ. ಆಧ್ಯಾತ್ಮ ಸಾಧನೆಯಲ್ಲಿ ದೇಹವೂ ಒಂದು ಉಪಾಧಿ. ಅದರಿಂದ ಬಿಡಿಸಿಕೊಳ್ಳಲು ದೇಹದ ಬಗ್ಗೆ ಸಂಪೂರ್ಣ ನಿರ್ಲಕ್ಷ್ಯ, ಅನಾಸಕ್ತಿ, ದೇಹಕ್ಕಂಟಿದ ನಾಚಿಕೆ, ಇತ್ಯಾದಿಗಳನ್ನು ಬಿಡುವುದು ಅನಿವಾರ್ಯವೆಂಬ ಅರಿವಿನೊಂದಿಗೆ ಅಕ್ಕಮಹಾದೇವಿ ಕಾಮದ ಚಿಂತೆ, ಕಾಯಗುಣಗಳ ಚಿಂತೆ ಬಿಟ್ಟು "ಕಾಯ ಕಪ್ಪನೆ ಕಂಡಿದರೇನು? ಕಾಯ ಮಿರ್ರನೆ ಮಿಂಚಿದರೇನು? ಅಂತರಂಗ ಶುದ್ಧವಾದ ಬಳಿಕ ಚೆನ್ನಮಲ್ಲಿಕಾರ್ಜುನಯ್ಯಾ ನೀನೊಲಿದ ಕಾಯವು ಹೇಗಿದ್ದರೇನಯ್ಯಾ?" ಎನ್ನುವ ನಿಲುವಿನೊಂದಿಗೆ, ಕಾಯವನ್ನು ಮರ್ಯಾದೆಯ ಮುಸುಕಿನಲ್ಲಿ ಇರಿಸಬೇಕೆಂಬ ವಿಚಾರವನ್ನೇ ಗಾಳಿಗೆ ತೂರಿಬಿಡುತ್ತಾಳೆ.

ಇಂತಹ ವೈಚಾರಿಕ ನೆಲೆಯಿಂದ ಹೊರಟ ಅಕ್ಕಮಹಾದೇವಿಯ ಪ್ರತಿಭಟನೆ ಮತ್ತು ಅನುಭಾವದ ಸ್ವರೂಪದ ವಿಶ್ಲೇಷಣೆಗೆ ಹೊರಡುವುದಕ್ಕೆ ಮೊದಲು ಬಸವಣ್ಣ ಮತ್ತು ಅವನ ಸಮಕಾಲೀನರು ಹೆಣ್ಣಿನ ಬಗ್ಗೆ ತಳೆದಿದ್ದ ವಿಚಾರಗಳೇನು ? ಹೆಣ್ಣನ್ನು ಸಾಮಾಜಿಕವಾಗಿ, ಯಾವ ನೆಲೆಯಲ್ಲಿರಿಸಿದ್ದರು ಎನ್ನುವುದನ್ನು ಅವರ ವಚನಗಳ ಮೂಲಕ ಅರ್ಥೈಸಿಕೊಳ್ಳುವುದು ಮುಖ್ಯವೆನಿಸುತ್ತದೆ.

ಸಂಸಾರ ವ್ಯಕ್ತಿಯನ್ನು ಬೆಂಬಿಡದೆ ಬೆನ್ನಟ್ಟಿ ಹುಡುಕಿ ತೆಗೆದು ಕಾಡುತ್ತದೆ, ಮಾಯೆಯಾಗಿಯೂ ಕಾಡುತ್ತದೆ. ವ್ಯಕ್ತಿಯನ್ನು ಅಸಹಾಯಕವಾಗಿಸಿ ಜೀವವನ್ನು ಹಿಂಡಿಬಿಡುತ್ತದೆ. ಇದರಿಂದ ಪಾರಾಗಲು ಸಂಸಾರವನ್ನು ಸೃಷ್ಟಿಸಿದವನಲ್ಲಿಗೆ ಶರಣು ಹೋಗಬೇಕು. ಎಲ್ಲಾ ಯಾತನೆಗೂ ಸಂಸಾರವೇ ಮೂಲ. ಇಲ್ಲಿಂದಲೇ ಅಜ್ಞಾನ, ಕಾಮ, ಕ್ರೋಧ, ಮೋಹ ಮತ್ಸರ ಪರಂಪರೆಯ ಹುಟ್ಟು ಆನಯಕ್ಕೆ ಕುಡಿವ, ವ್ಯಸನದಿಂದ ಬೇಯುವ, ಅತಿಯಾಸೆಯಿಂದ ಬಳಲುವ, ವಿಷಯ ಸುಖಕ್ಕೆ ಹಾತೊರೆದ, ಜೀವಿಗಳಿಗೆ ಚೆನ್ನಮಲ್ಲಿಕಾರ್ಜುನನ್ನು ಅರಿಯುವುದು ಸಾಧ್ಯವಿಲ್ಲ. ಈ ಎಲ್ಲಾ ಸ್ಥಿತಿಗಳಿಂದ ಮೀರಿ ನಿಲ್ಲಬಲ್ಲಂತಹ ಒಂದು ಅನುಭಾವ ಜಗತ್ತನ್ನು ಸೃಷ್ಟಿಸಿಕೊಂಡು ಲೌಕಿಕಕ್ಕೆ ಪರ್ಯಾಯವಾದ ಆಧ್ಯಾತ್ಮಿಕ ಬದುಕು, ಅಲೌಕಿಕ ಪ್ರೇಮದ ವಾತಾವರಣವನ್ನು ನಿರ್ಮಿಸಿಕೊಳ್ಳುವ ಕನಸು ಕಂಡ ಮಹಾದೇವಿಗೆ ಅಲ್ಲಿಯವರೆಗೆ ಲೌಕಿಕ ಒಡ್ಡುವ ಅಡೆತಡೆಗಳು, ಕಷ್ಟ ಪರಂಪರೆಗಳನ್ನು ಎದುರಿಸಬೇಕಾಗಿ ಬರುತ್ತವೆ. ಕಾಯ ಮುಕ್ತ ಸ್ಥಿತಿ ತಲುಪುವವರೆಗೆ ಹಸಿವು ತೃಷೆ ಶಯನದ ಸಮಸ್ಯೆಗಳನ್ನು ಎದುರಿಸುವ ಪರಿ ನೋಡಬಹುದು.

ಅಕ್ಕ ಅವನ ಪ್ರೇಮ ಬಂಧನದಲ್ಲಿ ಸಿಲುಕಿ ಅವನಲ್ಲಿ ಸ್ವಯವಾಗಲು, ವಿರಹಾಕುಲತೆ, ಉದ್ವಿಗ್ನತೆಗಳಿಂದ ತಳಮಳಿಸಿ ಅನ್ವೇಷಣೆಗೆ ಹೊರಟು, ಆರ್ತತೆಯಿಂದ ಸಚರಾಚನ ಜಗತ್ತನ್ನು ಅವಳ ಸುಳಿವು ನೀಡಲು ಪ್ರಾರ್ಥಿಸುತ್ತಾಳೆ. ಅವನನ್ನು ಕೊಡುವ ತವಕ, ತೀವ್ರತೆಗಳು ಒಂಟಿತನದ ಭಯಂಕರ ಯಾತನೆ, ಅವನ ಸುಳಿವು ದೊರೆವುದೋ ಇಲ್ಲವೋ ಎಂಬ ಆತಂಕ, ಅನುಮಾನಗಳು ಅವಳ ವಚನಗಳಲ್ಲಿ ನಿಚ್ಚಳವಾಗಿ ಕಾಣಿಸುತ್ತದೆ. ಇದೆಲ್ಲದರ ಹಿಂದೆ ಪ್ರೇಮದ ತೀವ್ರಾನುಭೂತಿಯ ಅಭೀಷ್ಪೆ ಇರುವುದು ಸ್ಪಷ್ಟವಾಗಿದೆ. ಅವಳ ನಿರಂತರ ಹುಟುಕಾಟಗಳು ಮಲ್ಲಿಕಾರ್ಜುನನೊಡನೆ ಶಾಶ್ವತ ಸಂಬಂಧ ರೂಪಿಸಿಕೊಳ್ಳುವುದಕ್ಕೆ ಪಡುವ ಪಾಡು ಆಕೆಯ ವಚನಗಳಲ್ಲಿ ಕಾಣಬಹುದು.

ವಿರಹಿಯೊಬ್ಬಳ ತೀವ್ರ ತುಡಿತದ ಮನಃಸ್ಥಿತಿಯ ವಿವರಣೆ ಲೌಕಿಕದ ಪರಿಭಾಷೆಯಲ್ಲಿದ್ದರೂ ಅನುಭಾವಿಕ ನೆಲೆಯಲ್ಲಿ ಪರಮಾತ್ಮನಿಗಾಗಿ, ನಲ್ಲನಿಗಾಗಿ, ಗಂಡನಿಗಾಗಿ ತುಡಿವ ಜೀವಾತ್ಮದ ಮನಃಸ್ಥಿತಿಯೇ ಆಗಿದೆ. ತನುಮನ ಪ್ರಾಣವೇ ಅವನಾಗಿರುವಾಗ ಅವನ ದಾರಿಕಾಯುವ ಪರಿಯನ್ನು ಗಮನಿಸಬಹುದು.

ಅಕ್ಕನ ದೃಷ್ಟಿಯಲ್ಲಿ ಚಡಪಡಿಸುವ ಹೊಯ್ದಾಡುವ, ಕಾತರಿಸುವ ಮನಸ್ಸಿಗೆ ನೆಮ್ಮದಿ ಸಾಂತ್ವಾನಗಳು ದೊರೆತಿದ್ದರೆ ಸುಳಿವು ಕಾಣಬಹುದು.

ಲೌಕಿಕದ ನೆಲೆಯಲ್ಲಿ ವಂಚಿತವಾದ ಸಂಭ್ರಮ, ಸಂತೋಷ, ಸಂಬಂಧಗಳು, ಅನುಭಾವದ ನೆಲೆಯಲ್ಲಿ ಸಾಧ್ಯವಾಗಿಸಿಕೊಂಡಿದ್ದಾಳೆ. ಜಲದ ಮಂಟಪ, ಉರಿಯ ಚಪ್ಪರ, ಆಲಿಕಲ್ಲ ಹಸೆ, ಕಾಲಿಲ್ಲದ ಹೆಂಡತಿ ಇತ್ಯಾದಿ ವಿವರಗಳಿಗೆ ಲೌಕಿಕ ಅರ್ಥಕ್ಕಿಂತ ಭಿನ್ನವಾದ ನೆಲೆಯ ಅರ್ಥಗಳಿವೆ. ಈ ಮದುವೆ ಮಾಡಿಸುವವರೂ, ಕೂಡಿದ ಬಂಧು ಬಳಗ, ತಂದೆ –

ತಾಯಿಗಳೂ, ಹೊಸದಾಗಿ ಹುಟ್ಟಿಕೊಂಡ, ಕಟ್ಟಿಕೊಂಡ ಸಂಬಂಧಗಳು ಅಕ್ಕಮಹಾದೇವಿಯ ಅನುಭಾವದ ಆಶಯಗಳಿಗೆ ಶಾಬ್ದಿಕ ಅಭಿವ್ಯಕ್ತಿಯಾಗಿ ಬಂದಿವೆ.

ಅಕ್ಕ ಒಂದು ಹೆಣ್ಣು, ಎಂತಹ ವೈರಾಗ್ಯದಲ್ಲಿದ್ದರೂ, ಎಷ್ಟೇ ದೊಡ್ಡ ಅನುಭಾವಿಯಾದರೂ ಪ್ರಪಂಚ ಹೆಣ್ಣಿನ ದಿಟ್ಟತನದ ಸ್ವೇಚ್ಛಾವರ್ತನೆ ನಿರ್ವಾಣಗಳನ್ನು ಸುಲಭವಾಗಿ ಒಪ್ಪಿಕೊಳ್ಳುವುದಿಲ್ಲ. ಅಂತೆಯೇ ಆಧ್ಯಾತ್ಮ, ಅನುಭಾವ ಜಗತ್ತಿನ ಮಂದಿಯೂ ಈ ನಿರ್ವಾಣವನ್ನು ಕಂಡು ಬೆಚ್ಚಿ ಬೆರಗಾಗುವುದಲ್ಲದೇ ವಿಶ್ವದಲ್ಲಿಯೇ ಕಂಡು ಕೇಳರಿಯದ ಅಪರೂಪದ ಈ ನಿಲುವನ್ನು ಒರೆಹಚ್ಚಿ ಪರೀಕ್ಷಿಸಿ, ಪ್ರಾಮಾಣೀಕರಿಸುತ್ತದೆ.

ನಿರ್ವಾಣದಲ್ಲಿ ಬಂದು ನಿಂತು ಅನುಭವ ಮಂಟಪದ ಅನುಭಾವ ಗೋಷ್ಠಿಯಲ್ಲಿ ಭಾಗವಹಿಸಲು ಮುಂದಾದ ಅಕ್ಕ ಹಲವು ಬಗೆಯ ಪ್ರತಿಕ್ರಿಯೆಗಳಿಗೆ ಸ್ವಾಭಾವಿಕವಾಗಿಯೇ ಗುರಿಯಾಗುತ್ತಾಳೆ.

ಅಕ್ಕನನ್ನು ಕೆಲವು ಕವಯತ್ರಿಯರು ಅಕ್ಕನ ನಿರ್ವಾಣ ಒಂದು ಬಗೆಯ ಅತಿರೇಕದಂಥ ವಿಪರೀತದಂತೆ ಕಾಣುತ್ತದೆ. ಎಷ್ಟೇ ಶರಣರಾದರೂ ಹೆಣ್ಣಿನ ವಿಚಾರದಲ್ಲಿ ಸಾಂಪ್ರದಾಯಿಕ ಮನೋಭಾವವನ್ನೇ ತಳೆದರು. ಮತ್ತೆ ಕೆಲವರು ಆಕೆಯನ್ನು ಕಾಯದ ಲಜ್ಜೆ, ಮನದಲಜ್ಜೆ, ಜೀವದ ಲಜ್ಜೆಯನ್ನುಳಿದವಳು ಎಂದರು.

ಅಕ್ಕನ ಶರೀರದ ಸರ್ವಾಂಗಗಳೂ ರೂಪಾಂತರಗೊಂಡಿದೆ. ಲೌಕಿಕದಲ್ಲಿ ಕಾಯ ಭೌತಿಕ ಸ್ಥಿತಿಯಲ್ಲಿ ಜೈವಿಕ ರಚನೆಯಲ್ಲಿ ಹೇಗಿರಬೇಕೋ ಹಾಗೆ ಕಾಣುತ್ತದೆ. ಆದರೆ ಅನುಭಾವಿಗಳ ಅನುಭವಕ್ಕೆ ಕಾಯದ ಅಸ್ತಿತ್ವ ಅನುಭಾವಿಕ ನೆಲೆಯಲ್ಲಿಯೇ ಲಭಿಸುತ್ತದೆ. ಈ ವಿಚಿತ್ರ ಅನುಭವಗಳು, ಬೆರಗು, ಇವಳಿಗೆ ಈ ಸ್ಥಿತಿ ಹೇಗೆ ಸಾಧ್ಯವಾಯಿತೆಂಬ ಪ್ರಶ್ನೆಯನ್ನು ಮುಂದೊಡ್ಡುತ್ತದೆ. ಅಕ್ಕನ ಅನುಭಾವದ ಎತ್ತರ, ಅವಳ ಆಧ್ಯಾತ್ಮಿಕ ವ್ಯಕ್ತಿತ್ವದ ಔನ್ನತ್ಯಗಳು ಎಲ್ಲರ ಸುಲಭ ಗ್ರಹಿಕೆಗೆ ದಕ್ಕುವುದಿಲ್ಲ.

ಅಂಗವನ್ನು ಲಿಂಗದಲ್ಲಿ ಲಯಗೊಳಿಸಿ, ಲಿಂಗಸಂಗ ಸುಖದಲ್ಲಿ ಇರುವವಳು ತಾನು ಅಂಗನೆಯರ ಅಂಗಾಂಗದಲ್ಲಿ ಕುಳಿತು ಕಣ್ಣ ಸೆಳೆವು ಮನಸೆಳೆವ ಕಾಮನನ್ನು ಹಣೆಗಣ್ಣಿಂದ ಸುಟ್ಟದ್ದು, ನಿವಾದರೂ ಮತ್ತೆ ಕರುಣದೋರಿ 'ಮನಸಿಜನಾಗಿ' ಉಳಿಸಿದ ಕಾಮನನ್ನು ಕೂಡ ಸುಟ್ಟವಳು ತಾನು, ಶಿವನ ಬೆಳಗನನ್ನೇ ಸೀರೆ ಕುಪ್ಪಸವಾಗಿ ಉಟ್ಟವಳಿಗೆ ಲಿಂಗವನ್ನೇ ಪುರುಷನಾಗಿ ಪಡೆದವಳಿಗೆ ಕಾಮನ ಕಾಟವೂ ಇಲ್ಲ. ಕಾಯದ ಕೂಟವೂ ಇಲ್ಲ ಎಂದು ಬಾಯಿ ಮುಚ್ಚಿಸುವಷ್ಟು ಸಮರ್ಥಳು. ಕಾಮದ ಲಜ್ಜೆಯನ್ನು ಮರೆಮಾಡುವ ಯಾವ ಆಭರಣಗಳೂ ಇಲ್ಲ. ಹೆಣ್ಣೆಂಬ ಭಾವದ ಲಜ್ಜೆಯೂ ಇಲ್ಲ. ರೂಹಿಲ್ಲದ, ಮನವಿಲ್ಲದ, ಜೀವವಿದ್ದೂ, ಜೀವವಿಲ್ಲದ, ಭಾವವಿದ್ದೂ ಭಾವವಿಲ್ಲದ, ಭವವಿದ್ದೂ ಭವವಿಲ್ಲದ ನೆಲೆಗೆ ತನ್ನನ್ನು ನಿಲ್ಲಿಸಿಕೊಳ್ಳಬೇಕು. ಅದು ಅವಳಿಗೆ ಸಾಧ್ಯವಾಯಿತು. "ದೇಹದ ಸಂಗ; ದೇಹದ ಗುಣಧರ್ಮ ಕರ್ಮವಾದ ವಿಕಾರವನ್ನು ಬಿಚ್ಚಿ ಕಳಚಿಕೊಳ್ಳಬೇಕಾದರೆ ಮನಶುದ್ಧವಾಗಿರಬೇಕು. ತನು, ಮನ, ಇಂದ್ರಿಯಾದಿಗಳೆಲ್ಲವೂ

'ಶುದ್ಧ ಸುಯಿದಾಗಿ' ಯಾಗಿ ಲಿಂಗಮುಖಕ್ಕೆ ಅರ್ಪಿತವಾದಲ್ಲದೆ ಅವನೊಲಿದಾನು ಹೇಗೆ " ಎಂಬ ಪ್ರಶ್ನೆಗೆ ಅಕ್ಕನು ತನ್ನ ನಿಲುವನ್ನು ತನ್ನ ಮಾತುಗಳಲ್ಲಿಯೇ ವಿವರಿಸಿರುವುದನ್ನು ನಮ್ಮ ಕವಯತ್ರಿಯರ ದೃಷ್ಟಿಯಲ್ಲಿ ಕಾಣಬಹುದು.

ಅಕ್ಕನ ಪ್ರಕಾರ ತಿಳಿಯುವುದಾದರೆ ನಾವು ಹೆಪ್ಪಿಟ್ಟ ಹಾಲು, ಹಾಲಾಗಿ ಉಳಿಯದೆ ತುಪ್ಪದ ರೂಪದಲ್ಲಿ ತನ್ನ ಸಿಹಿ, ಸವಿಯನ್ನು ನೀಡುತ್ತಾ, ಉಳಿಸಿಕೊಳ್ಳಬಹುದು. ಅವಳ ದಿಟ್ಟತನ, ಅನುಭಾವ, ನಿಲುವು ನಿರಹಂಭಾವಗಳು ನಮ್ಮ ಕವಯತ್ರಿಯರನ್ನು ಮಂತ್ರಮುಗ್ಧಗೊಳಿಸುತ್ತದೆ. ಒಂದಾದ ಮೇಲೊಂದು ಪ್ರಶ್ನೆಗಳು ಗಹನ, ಗಂಭೀರ ತಾತ್ವಿಕ ಚರ್ಚೆ ! ಅನುಭಾವಿಕ ನಿಲುವನ್ನು ಒರೆಹಚ್ಚಿ ನೋಡಲು ಮಾತಿನ ಮೂಲಕ ಒಡ್ಡಿದ ದಿವ್ಯಗಳು !! ಅಕ್ಕಮಹಾದೇವಿ ಅಂಜದೆ, ಅಳುಕದೆ, ತಾನು 'ಸ್ವಲಿಂಗಿ' ಯಾದುದನ್ನು ಸರ್ವಾಂಗ ಲಿಂಗಿಯಾದುದನ್ನು ಮಲ್ಲಿಕಾರ್ಜುನನೊಡನೆ ಬೆರಸಿನಿಂತ ಪರಿಯನ್ನು ವಿವರಿಸಿ, ಮನ ಗೆಲ್ಲುತ್ತಾಳೆ.

ಅದೆಲ್ಲಾ ತನ್ನ ಪರೀಕ್ಷೆಗೆಂದೇ ತಿಳಿದವಳು. ಪರೀಕ್ಷೆಗೆ ಒಡ್ಡಿಕೊಳ್ಳುತ್ತ ಒರೆಗೆ ಒಳಗಾಗುತ್ತ ಮತ್ತಷ್ಟು ಹೊಗರೇರಿ ನಿಲ್ಲುತ್ತಾಳೆ. ಎಂತಹ ಸನ್ನಿವೇಶಗಳು ತನ್ನ ಸ್ಥಿತಿಯನ್ನು ನಿಂತ ನಿಲುವನ್ನು ಬದಲಿಸಲಾರವು. ಅಗ್ನಿ ದಿವ್ಯಗಳು ತನ್ನ ಪಾಲಿಗೆ ಸವಾಲುಗಳಾಗಬಲ್ಲವು. ಪ್ರಪಂಚದಲ್ಲಿನ ಎಲ್ಲಾ ನೋವು, ಹಿಂಸೆ, ಅರಿತೋ ಅರಿಯದೆಯೋ, ಭೌತಿಕ ಕಾಯದೊಂದಿಗಿನ ಸಂಬಂಧ ಮೂಲದಿಂದ ಆಗಿರಬಹುದಾದ ಅಪರಾಧಗಳು, ಅವುಗಳನ್ನು ನೆನಪಿಸುವುದು ಶರಣರಂತವರಿಗೆ ಮಾನ್ಯವಲ್ಲ. ಕವಯತ್ರಿಯರ ಮೆಚ್ಚಿಗೆಯ ನುಡಿ ಉಭಯನಾಮವಳಿದು ನಿಂದ ಅವಳ ನಿಲುವು ಶರಣ ಸಮಾಜದ ಎದುರು ಅನುಭಾವದ ಶಿಬಿರದ ತುತ್ತತುದಿಯಲ್ಲಿರುವಂತೆ ಮಾಡುತ್ತದೆ. ಸರ್ವಾಂಗ ಸ್ವಾನುಭಾವವನ್ನು ತುಂಬಿಕೊಂಡವಳು ತಾನು, ಅವಳ ನಿಲುವರಿತರೆ ಸಾಲದು, ಏನೇ ಆದರೂ ಹದಿನಾರರ ಪ್ರಾಯದ ಹೆಣ್ಣುಮಗಳು, ಇನ್ನೂ ಎಳೆಯ ವಯಸ್ಸು, ಕಣ್ಣುಕುಕ್ಕುವ ಅಂಗವಿಲಾಸ ; ಆದರೂ ಅವಳು ಸಾಧಿಸಿದ ಅನುಭಾವ, ರೂಪಿಸಿಕೊಂಡ ಆಧ್ಯಾತ್ಮಿಕ ವ್ಯಕ್ತಿತ್ವ ಅನನ್ಯವಾದುದು.

ಲೋಕದಲ್ಲಿ ಹುಟ್ಟಿಯೂ, ಲೋಕಾತೀತ ನೆಲೆಯಲ್ಲಿಯೇ ತನ್ನ ವ್ಯಕ್ತಿತ್ವವನ್ನು ರೂಪಿಸಿಕೊಳ್ಳುವಲ್ಲಿ ಗುರುಕರುಣೆ ಶರಣಸಂಗ, ಅನುಭಾವ ಗೋಷ್ಠಿಗಳು ಸಹಕರಿಸಿವೆ. ತನ್ನನ್ನೂ ಉದ್ಧಾರ ಮಾಡಿದೆ. ಎಂಬ ಭಾವ ಪ್ರಪಂಚದ ಅಥವಾ ಸಂಸಾರದ ಸಂಗದಿಂದ ದೂರವಾಗುವುದಕ್ಕೆ, ಪೂರೈಸಿಕೊಳ್ಳಲಾಗದ ಹರಕೆಗಳ ಪೂರೈಕೆಗೆ ಅಲೌಕಿಕ ಪ್ರೇಮ ಜಗತ್ತನ್ನು ಸೃಷ್ಟಿಸಿಕೊಂಡು ಹೊಸ ಸಂಬಂಧಗಳನ್ನು ರೂಪಿಸಿಕೊಳ್ಳುವುದಕ್ಕೆ ಕಾರಣರಾದವರೆಲ್ಲರನ್ನೂ ಸ್ಮರಿಸಿಕೊಳ್ಳುತ್ತಾನೆ. ತನ್ನ ಆಧ್ಯಾತ್ಮ ಬಂಧುಗಳು ಒಬ್ಬೊಬ್ಬರೂ ತನ್ನನ್ನು ಒಂದೊಂದು ರೀತಿಯಲ್ಲಿ ರೂಪಿಸುವಲ್ಲಿ ಸಹಕರಿಸಿದ್ದಾರೆ.

ತನ್ನ ಇಡೀ ವ್ಯಕ್ತಿತ್ವದ ಬೆಳವಣಿಗೆಗೆ, ಬದುಕಿಗೆ ಒಂದು ರೂಪ ಕೊಟ್ಟವರನ್ನು ಸ್ಮರಿಸಿಕೊಂಡಿದ್ದಾಳೆ. ಲೌಕಿಕದ ನೆಲೆಯಲ್ಲಿ ಭೌತಿಕ ಕಾಯದ ಪೋಷಣೆಗೆ ಹಾಲು, ತುಪ್ಪ, ಸಕ್ಕರೆ

ಆಧ್ಯಾತ್ಮಿಕ ನೆಲೆಯಲ್ಲಿ ಭಾವ, ಸುಜ್ಞಾನ ಪರಮಾರ್ಥಗಳೇ ಪೋಷಕ ಸತ್ವಗಳಾಗಿವೆ. ಸಾಮಾಜಿಕ ಅಥವಾ ಲೌಕಿಕ ನೆಲೆಯ ಸಂಬಂಧಗಳನ್ನು ನಿರಾಕರಿಸಿ ಬಂದವಳಿಗೆ ಶರಣರೇ ಬಂಧುಗಳು ; ತಂದೆ – ತಾಯಿಗಳು ; ಇವರೇ ತಾನೊಲಿದ ಅಲೌಕಿಕ ಗಂಡನ ಜೊತೆಗೆ ವಿವಾಹ ಮಾಡಿ, ಗಂಡನ ಮನೆಗೆ ಕಳುಹಿಸಿಕೊಡುವವರು. ಅವರ ನಿರೀಕ್ಷೆಯಂತೆ ರೂಹಿಲ್ಲದ ಚೆಲುವ ಗಂಡನೊಡನೆ ಸಾಮರಸ್ಯದ ಒಗೆತನವನ್ನು ಮಾಡಿ ಅವರೆಲ್ಲರ ತಲೆಗೆ ಹೂವ ತರೆನೆಂಬ ಭರವಸೆಯೊಂದಿಗೆ ಶ್ರೀಶೈಲದೆಡೆಗೆ ನಡೆದು ಚೆನ್ನಮಲ್ಲಿಕಾರ್ಜುನನ ಬೆಳಗಲ್ಲಿ ಬೆಳಗಾಗಿ ಹೋಗುವುದರೊಂದಿಗೆ ಅವಳ ಆಧ್ಯಾತ್ಮಿಕ ಪ್ರಯಾಣ ಮುಗಿಯುತ್ತದೆ.

ಇಂತಹ ಅಕ್ಕಮಹಾದೇವಿಯ ಬದುಕಲ್ಲಿ ಪ್ರತಿಭಟನೆ ಆಧ್ಯಾತ್ಮ ಅಥವಾ ಅನುಭಾವಗಳು ಬೆಸೆದುಕೊಂಡ ಪರಿ ಹೇಗೆಂಬುದು ಒಂದು ದೊಡ್ಡ ಪ್ರಶ್ನೆಯಾಗುತ್ತದೆ. ಅವಳನ್ನು ಅನುಭಾವಿಯಾಗಿ ಕಾಣಬೇಕೇ ? ಅಥವಾ ಸ್ತ್ರೀವಾದಿ ಚಿಂತನೆಯೊಂದಿಗೆ ಅವಳನ್ನು ಪರಿಗಣಿಸಬೇಕೇ ? ಇವತ್ತಿನ ಅರ್ಥದಲ್ಲಿ ಗ್ರಹಿಸುವುದಕ್ಕಿಂತ ತಿರಸ್ಕಾರ, ನಿರಾಕರಣೆ ಎಂಬ ಅರ್ಥಗಳಲ್ಲಿ ಗಮನಿಸಬೇಕಾಗುತ್ತದೆ. ಪ್ರಪಂಚದ ಅರಿವಿರಿಸಿಕೊಂಡೂ ಅದರ ನಶ್ವರತೆ ಅಲ್ಲಿನ ಬದುಕಿನಲ್ಲಿನ ಅನಿಶ್ಚಿತತೆ, ಮನುಷ್ಯನ ಸಂಬಂಧಗಲ್ಲಿ ಸ್ವಭಾವಗಳಲ್ಲಿನ ದುರಾಶೆ, ಸ್ವಾರ್ಥ, ಹಿಂಸೆ, ಕ್ರೌರ್ಯ, ದುಷ್ಟತನಗಳು, ಕುಟುಂಬ ವ್ಯವಸ್ಥೆಯಲ್ಲಿ ಹೆಣ್ಣಿನ ಸ್ಥಾನ ಹೆಣ್ಣನ್ನು ಸಮಾಜದಲ್ಲಿ ಪರಿಗಣಿಸುವ ರೀತಿ, ನೋಡುವ ದೃಷ್ಟಿ – ಎಲ್ಲದರ ಬಗೆಗಿನ ಎಚ್ಚರವಿತ್ತು.

ಹೆಣ್ಣನ್ನು ವಿಶೇಷವಾಗಿ ಸಮಾಜದಲ್ಲಿ ಭೋಗ ಸಾಮಗ್ರಿಯಾಗಿ, ಸಂತಾನಯಂತ್ರವಾಗಿ, ಗಂಡಿನ ಗುಲಾಮಳಾಗಿಯೇ ಪರಿಗಣಿಸಲಾಗುತ್ತದೆ.

ಲೌಕಿಕದ ನೆಲೆಯಲ್ಲಿ ಇಂತಹ ಅನುಭವಗಳಿಗೆ ಒಳಗಾಗುವ ಸನ್ನಿವೇಶಗಳು ನಿರ್ಮಾಣವಾದಾಗ, ವೈಯಕ್ತಿಕ ನೆಲೆಯಿಂದ ವಿರೋಧಿಸಿದಳು ; ಧಿಕ್ಕರಿಸಿದಳು.

ಕೌಶಿಕನೊಡನೆ ಬಲವಂತದ ಮದುವೆ, ಅವನ ಜೊತೆ ಒಗೆತನಗಳು, ತನ್ನ ಕಲ್ಪಿತ ಆಶಯಗಳಿಗೆ, ಕಟ್ಟಿಕೊಂಡ ಕನಸುಗಳಿಗೆ ತದ್ವಿರುದ್ಧವಾಗಿದ್ದುದರಿಂದ ಅಸಹನೀಯವೆನಿಸಿತು. ಪುರುಷ ಪ್ರತಿನಿಧಿಯಂತೆ ಕಾಣುವ ಕೌಶಿಕನ ಕಾಮ ವಿಕಾರತೆ, ಲೈಂಗಿಕ ಅಪೇಕ್ಷೆಗಳು ಹೇಸಿಗೆಯ ಭಾವವನ್ನು ಮೂಡಿಸಿತು.

ಈ ಪ್ರಪಂಚದಲ್ಲಿ ಮೃಗ ಸ್ವಭಾವದ ಮನುಷ್ಯರಿರಬಹುದು, ಕಷ್ಟಸುಖಗಳೆಂಬ ತೆರೆಗಳಿರಬಹುದು, ಸ್ತುತಿ ನಿಂದೆಗಳೆಂಬ ಶಬ್ದವಿರಬಹುದು, ಅವೆಲ್ಲದರಿಂದ ಉಂಟಾಗುವ ಮಾನಸಿಕ ತೊಂದರೆಗಳನ್ನು ಸಮಾಧಾನ, ತಾಳ್ಮೆಯಿಂದ ಸಹಿಸಿಕೊಳ್ಳಬೇಕು ಎನ್ನುವ ವಿನಯದ ನಿಲುವು ಅವಳದಾಗಿದೆ.

ಪ್ರಪಂಚದಲ್ಲಿ ಹುಟ್ಟುವುದು, ಅನುಭವಿಸುವುದು ನಮ್ಮ ಪೂರ್ವ ಕರ್ಮಗಳಿಂದ ಹಾಗಾಗಿ ನಮ್ಮ – ನಮ್ಮ ಪಾಲಿಗೆ ಬಂದದ್ದನ್ನು ನಾವು ಅನುಭವಿಸದೇ ವಿಧಿಯಿಲ್ಲ. ಅಂದರೆ ಕಷ್ಟ ಪರಂಪರೆಗಳೂ ಕೂಡಾ ಅವನಿಂದಲೇ, ಆ ಭಗವಂತನಿಂದಲೇ, ಆಧ್ಯಾತ್ಮ ಸಾಧನೆಯಲ್ಲಿ ಮತ್ತು

ಲೌಕಿಕದ ನೆಲೆಯಲ್ಲಿಯೂ ಪೂರ್ವ ಜನ್ಮದಿಂದಾಗಿ, ಅನುಭವಿಸಬೇಕಾಗಿ ಬರುವ ಕಷ್ಟನಷ್ಟಗಳನ್ನು ಸ್ವಪ್ರಯತ್ನದಿಂದ ನಾವೇ ಎದುರಿಸಿ ಗೆಲ್ಲಬೇಕಾಗುವುದು. ಅದನ್ನು ಅನುಭವಿಸಿಯೂ ಮೀರಿ ನಿಲ್ಲುವೆನೆಂಬ ಧೈರ್ಯ, ಆತ್ಮವಿಶ್ವಾಸಗಳನ್ನು ವ್ಯಕ್ತಪಡಿಸಿದ್ದಾಳೆ. ಅವಳು ಅನುಭವಿಸುತ್ತಿರುವ ಯಾತನೆಯ ಸ್ವರೂಪವನ್ನು ಬಂಜೆ, ಬಲದಾಯಿ, ನೋಯದ ಸ್ವರೂಪ, ನೋವಿನ ಅನುಭವವೇ ಇಲ್ಲದವರಿಗೆ ಹೇಗೆ ಸಾಧ್ಯ ? ಅಲೌಕಿಕ ಗಂಡನ ಪ್ರೀತಿಯು ಅಲಗಿನಂತೆ ಒಳಗಿಳಿಯ ಹಿಂಸಿಸುತ್ತಿದೆ. ಅಹಿಂಸೆ, ನೋವುಗಳು, ಅರ್ಥಮಾಡಿಕೊಳ್ಳುವುದು ಅಷ್ಟು ಸುಲಭವಲ್ಲ.

ಅಕ್ಕಮಹಾದೇವಿ ಸಂಪ್ರದಾಯಸ್ಥ ಸಮಾಜದ ಕಟ್ಟುಪಾಡುಗಳ ವಿರುದ್ಧವಾಗಿಯೂ, ಹೋರಾಡಬೇಕಿತ್ತು. ಅದೇ ಹೊತ್ತಿನಲ್ಲಿ ತನ್ನ ಒಳಗಿನ ಶತ್ರುಗಳಾದ ಇಂದ್ರಿಯಗಳಾದ ಸೆಳೆತವನ್ನೂ ಗೆಲ್ಲಬೇಕಿತ್ತು. ಬಹಿರಂಗ ಅಂತರಂಗಗಳೆರಡರಲ್ಲೂ ಆಕೆಯ ಹೋರಾಟಗಳು ಸಾಗಿದ ಬಗೆಯನ್ನು ಮತ್ತು ಸಂಸಾರ ನಿರಾಕರಣೆ ಎಂಬುದು ಆಕೆಗೆ ಪಲಾಯನ ಸೂತ್ರವಾಗಿ ಇರಲಿಲ್ಲ. ಇಹದ ಬದುಕಲಿ ಬದುಕಿರುವುದು ಅನಿವಾರ್ಯ. ತನ್ನ ಮಾನವ ದೇಹ ಅದಕ್ಕಂಟಿದ ಮನಸ್ಸುಗಳು ಮರ್ತ್ಯವನ್ನು ಬಿಡುಗೊಡುವುದಿಲ್ಲ. ಎಂಬ ಅರಿವು ಆಕೆಗಿದೆ. ಇಂಥ ಆಂತರಿಕ ಸಂಘರ್ಷದ ನೆಲೆಗಳು, ಹೋರಾಟದ ವೀರಭಾವ, ಇಲ್ಲಿರುವ ದೃಢತೆ, ನಿರ್ಧಾರಬಲಗಳು ಭಿನ್ನ ಭಿನ್ನ ಸ್ಥಿತಿಗಳನ್ನು ಹೇಗೆ ಆಕೆ ಎದುರಿಸಿದಳು ಎಂಬುದನ್ನು ಅರ್ಥಮಾಡಿಸುತ್ತವೆ. ಏಕಾಂಗಿಯಾಗಿ ಊರೂರು ಕಾಡು – ಮೇಡು ಸುತ್ತಿದ್ದ ಈ ಅವಧೂತಾವಸ್ಥೆಯನ್ನು ಪರಿವ್ರಾಜಕತನದಲ್ಲಿ ಆಕೆಗಿರುವ ಬೆನ್ನ ಬಲ ಈ ಧೈರ್ಯವೇ ಚೆನ್ನಮಲ್ಲಿಕಾರ್ಜುನನ ಅರಿವೇ ಇಲ್ಲಿ ಸಖಿ, ಸಂಗಾತಿ.

ವಿರಾಗಿಣಿಯ ಈ ಅಲೆಮಾರಿ ನೆಲೆ ಹೆಣ್ಣಿನ ಸಾಂಪ್ರದಾಯಿಕ ಕೌಟುಂಬಿಕ ಭದ್ರತೆಯ ನೆಲೆಗೆ ಪೂರ್ತಿ ವಿರುದ್ಧವಾದದ್ದು ಅಂಥ ಭದ್ರತೆಯ ನೆಲೆಯನ್ನು ಧಿಕ್ಕರಿಸಿ, ಈ ವಿರಕ್ತ ನೆಲೆಯನ್ನು ಅಕ್ಕ ಆರಿಸಿಕೊಂಡದ್ದು ಆಕೆಯ ವಾಸ್ತವ ಬದುಕಿನ ಕ್ರಿಯೆಯೂ, ತಾತ್ವಿಕವಾದ ಆಂತರಿಕ ನಿಲುವೂ ಆಗಿದೆ. ಆ ಲೋಕ ವಿರೋಧಿಯಾದ ಹಾದಿಗೆ ಹೊರಟ ಬಳಿಕ ಅದನ್ನು ಅರ್ಥಮಾಡಿಕೊಳ್ಳಲಾರದ ಜನರು ಕ್ಷುದ್ರ ವರ್ತನೆ, ಕಟುಟೀಕೆ, ನಿಂದನೆ, ಆಡಿಕೆ ಮಾತುಗಳಿಗೆ ಆಕೆ ಒಳಗಾಗಿರುವುದು ಸಹಜ. ಆದರೆ, ಅಂಥ ಕೋಪ, ಆಕ್ಷೇಪ, ಅಪಹಾಸ್ಯಗಳಿಗೆ ಜಗ್ಗುವ ಚೇತನವಲ್ಲ ಆಕೆಯದು. ಲೋಕವೇ ತಿರುಗಿಬಿದ್ದರೂ, ಸಾವೇ ಎದುರಾದರೂ ಅಂಜದೆ ಇರುವ ಮನಸ್ಥೈರ್ಯ ಆಕೆಯದು.

ಹೆಣ್ಣನ್ನು ಶರೀರವಷ್ಟೇ ಆಗಿ ನೋಡುವ ಭೋಗದ ಸರಕನ್ನಾಗಿ ಮಾತ್ರ ಉಳಿಸಬಹುದಾದ ಲೋಕದೃಷ್ಟಿಯನ್ನು ತನ್ನ ವೈಯಕ್ತಿಕ ನೆಲೆಯಲ್ಲೂ, ಸಾಮಾಜಿಕವಾಗಿಯೂ ತಿದ್ದಲು ಯತ್ನಿಸಿದ್ದು ಅಕ್ಕನ ಒಂದು ಬಲವಾದ ಹೋರಟವೇ ಆಗಿದೆ. ಹೆಣ್ಣಿನಲ್ಲಿರುವ ವ್ಯಕ್ತಿತ್ವವನ್ನು ಸತ್ವವನ್ನೂ ಕಾಣಬೇಕೆಂದು ಆಕೆ ಒತ್ತಾಯಿಸಿರುವುದು ಮಹತ್ವದ್ದಾಗಿದೆ. ಆದರೆ ಆಕೆಯ ಈ ಒತ್ತಾಯಕ್ಕಾಗಿ, ಆಕೆ ಬಳಸಿಕೊಳ್ಳುವ ವಿಚಾರಗಳು ಕೆಲವು ಸಲ ಅಂಚಿನ ಪರಿಸರದಲ್ಲಿ ಸಂಸಾರಿಗರು ಅಥವಾ ವಿರಕ್ತರು ನಂಬಿದ್ದಂಥ ವಿಚಾರಗಳೇ ಆಗಿರುವುದುಂಟು.

ಇತ್ತೀಚೆಗೆ ಸ್ತ್ರೀವಾದ, ಸ್ತ್ರೀ ಸ್ವಾತಂತ್ರ್ಯ, ಸ್ತ್ರೀ ಸಮಾನತೆಯ ಮಾತುಗಳು ಎಲ್ಲೆಡೆಯಲ್ಲಿಯೂ ಕೇಳಿ ಬರುತ್ತಿದೆ. ಆದರೆ ಇವೆಲ್ಲವುಗಳನ್ನೂ ಅಂದು ಅಕ್ಕ ತನ್ನ ಜೀವನದ ಉದ್ದಕ್ಕೂ ಅರ್ಥೈಸಿಕೊಂಡು ನಡೆದಳು. ಗಂಡು ಹೆಣ್ಣುಗಳೆಂಬ ಲಿಂಗಬೇಧವಿಲ್ಲದೆ ಹೆಣ್ಣಿಗೆ ಆತ್ಮವಿದೆ. ಅವಳಿಗೂ ತನ್ನದೇ ಆದ ವೈಚಾರಿಕ ಭಾವನೆಗಳಿವೆ. ಅವಳಿಗೂ ಆಧ್ಯಾತ್ಮಿಕ ಕಳಕಳಿ ಇದೆ ಎಂಬ ನಿತ್ಯ ಸತ್ಯವನ್ನು ಅರಿತು ಸ್ತ್ರೀಯರನ್ನು ಪುರುಷ ಸಮಾನತ್ವದ ದಾರಿಯಲ್ಲಿ ನಡೆಸಿಕೊಂಡು ಹೋಗಬೇಕೆನ್ನುವುದನ್ನು ಅರಿತಾಗ ಮಾತ್ರ ಈ ಸಮಾಜದಲ್ಲಿ ಸಮಾನತ್ವದ ನೆಲೆಯಾಗಬಹುದು.

ಅಕ್ಕ ಕೇವಲ ಆಧ್ಯಾತ್ಮಿಕ ವಿಚಾರವಾದಿಯಾಗಿರದೆ ಅಭಿವ್ಯಕ್ತಿ ಸ್ವಾತಂತ್ರ್ಯದ ಮುಖವಾಣಿಯಾಗಿದ್ದಳೆಂದೇ ಭಾವಿಸಬೇಕಾಗಿದೆ. ಅಕ್ಕ ಹುಟ್ಟು ಬ್ರಹ್ಮಚಾರಿಣಿಯಾಗಿ ಬಂದು ನಿರ್ಮಾಣದ ಗೆಲಿದು, ವೈರಾಗ್ಯವ ಮೆರೆದು, ಭಕ್ತೆಯಾಗಿ ಮೃತ್ಯುರ್ಲೋಕದ ಬೆಳಗಿದಳು. ಅವಳೊಬ್ಬ ಕವಿಯತ್ರಿ, ತತ್ವಶಿಖಾಮಣಿ, ಸಾನುಭಾವಿ, ಆಕೆಯ ಅನುಭವ ಅಪಾರವಾದುದು. ಸ್ವಭಾವತಃ ವಿನಯ ಶೀಲಳಾಗಿದ್ದರಿಂದ ಶ್ರದ್ಧೆ ಮನಸಿನಲ್ಲಿ ತುಂಬಿ ತುಳುಕುತ್ತಿತ್ತು. ಅಚಲವಾದ ನಿಷ್ಠೆಯಿಂದ ತನ್ನ ಗುರಿಯನ್ನು ಸಾಧಿಸಿದ ಧೀರೆ, ಧೈರ್ಯವಂತಳು, ದೈವನಿಷ್ಠಳು, ಶಿವಧರ್ಮ ಸಾಧಕಳು, ಅವಳನ್ನು ಯಾವ ರೀತಿ ಕೊಂಡಾಡಿದರೂ ನಾಲಿಗೆಯ ಬರ ಹಿಂಗದು.

ಅಕ್ಕನ ಬದುಕಿನ ಅಸಾಮಾನ್ಯ ರೀತಿ, ಆಕೆಯ ಸಾಧನೆಗಳು, ಮುಂದಿನ ಧಾರ್ಮಿಕ ಕವಿಗಳ, ಚಿಂತಕರ ಮನಗಳಲ್ಲಿ ಹುಟ್ಟಿಸಿರಬಹುದಾದ ಗೌರವ, ವಿಸ್ಮಯ ಶ್ರದ್ಧೆಗಳ ಫಲವಾಗಿ ಹುಟ್ಟಿಬಂದ ಮಹಾಶಿವಶರಣೆಯ ಪುಣ್ಯ ಚರಿತೆಗಳು ತಮ್ಮ ಕಾಲದಲ್ಲಿ ದೊರೆತಂಥ ಅಕ್ಕಮಹಾದೇವಿಯ ಬದುಕಿನ ವಿವರಗಳನ್ನು, ಆಕೆಯ ವಚನಗಳ ಅರ್ಥಭಾವಗಳನ್ನು ತಮ್ಮ ಗ್ರಹಿಕೆಗೆ, ಉದ್ದೇಶಕ್ಕೆ, ಭಾವನೆಗಳಿಗೆ ತಕ್ಕಂತೆ ಇವರು ಬಳಸಿಕೊಂಡಿದ್ದಾರೆ. ಸಹಜವಾಗಿಯೇ ಇವರೆಲ್ಲರೂ ನೀಡುವ ವಿವರಗಳಲ್ಲಿ ಎದ್ದು ತೋರುವಂಥ ವ್ಯತ್ಯಾಸಗಳಿವೆ. ಇವುಗಳನ್ನು ಆಧರಿಸಿದ ಅಕ್ಕನ ವಚನಗಳ ಒಳಭಾವವನ್ನು ಗ್ರಹಿಸುತ್ತ ಆಧುನಿಕ ಧರ್ಮಾಸಕ್ತ ವಿಮರ್ಶಕರು, ಸಂಶೋಧಕರು ಮತ್ತು ಸಾಹಿತಿಗಳು ಕಟ್ಟಿಕೊಡುವ ಚಿತ್ರವು ದೈವಾಂಶವುಳ್ಳ ಆದ್ದರಿಂದ ಮತ್ಸ್ಯದ ಛಾಯೆ, ಮಾಯೆಗಳಿಂದ ಮುಕ್ತಳಾದ ಆಧ್ಯಾತ್ಮಗಿರಿಯ ಶಿಖರವೇರಿನಿಂದ ಮಹಿಮಾವಂತಳ ಚಿತ್ರವಾಗಿದೆ. ಸ್ವಲ್ಪದರಲ್ಲಿ ಹೇಳುವುದಾದರೆ ಮಹಾದೇವಿಯಕ್ಕನನ್ನು ಮಲ್ಲಿಗೆಯಂತೆ ಬಿಳುಪಾದ ಸುಂದರ ಪರತತ್ವ ದನಿ ಕಳಂಕ ಭಕ್ತೆಯಾಗಿಯೇ ಪರಂಪರೆಯು ಕಾಣುತ್ತ ಬಂದಿದೆ.

ಅಕ್ಕನು ಸ್ತ್ರೀವಾದಿ ಮತ್ತು ಸ್ತ್ರೀ ಸ್ವಾತಂತ್ರ್ಯದ ಪ್ರಥಮ ಪ್ರತಿಪಾದಕಗಳು ಎಂದೇ ಹೇಳಬಹುದು. ಹೆಣ್ಣಿನ ಜೀವನದ ಪ್ರಮುಖ ಘಟ್ಟಗಳಲ್ಲಿ ಒಂದಾದ ಪ್ರಸಂಗ, ಮದುವೆ, ಇದನ್ನೂ ಅಕ್ಕ ತನ್ನ ಮನಕ್ಕೆ ಒಪ್ಪಿದ ದೇವನನ್ನೇ ಗಂಡನಾಗಿ ಸ್ವೀಕರಿಸಿದಳು. ಆಕೆಯ ಧೈರ್ಯ, ಛಲ, ಹಟವಾದ, ತಾರ್ಕಿಕತ್ವದ ಅಹಿಂಸಾಮೂರ್ತಿ, ಅಪೂರ್ವ ಸಾಧಕಿ ಸಂಕಲ್ಪದ ಬಲದಿಂದ ಸಿದ್ಧಿಯನ್ನು ಪಡೆದವಳು. ಕನ್ನಡ ನಾಡಿನ ಪ್ರಥಮ ಅನುಭಾವಿ ಕವಯತ್ರಿ ತತ್ವಜ್ಞಾನ ಪ್ರಪಂಚದಲ್ಲಿ

ಸ್ತ್ರೀ ಪುರುಷರ ಸಮಾನತೆಯನ್ನು ಪ್ರತಿನಿಧಿಸಿದ ಪ್ರಥಮ ಮಹಿಳೆ. ಕನ್ನಡ ಸಾಹಿತ್ಯ ಪರಂಪರೆ ಅಕ್ಕನ ಲೌಕಿಕ ಜೀವನದ ವಿವರಗಳನ್ನು ಕಾಲಕಾಲಕ್ಕೆ ಪರಿಷ್ಕರಿಸಿಕೊಂಡು ಬಂದಿರುವುದರಿಂದ ಅನೇಕ ವಿವಾಹಗಳಿಗೂ ಆಸ್ಪದವಾಗಿದೆ. ವಾದ – ವಿವಾದಗಳ ಚರ್ಚೆಗೆ ತೊಡಗದೆ ನಮ್ಮ ನಾಡಿನ ನೆಲದ ಮಗಳಾಗಿ ತನ್ನ ಅಪರೂಪದ ಚಿತ್‌ಶಕ್ತಿ, ಆತ್ಮವಿಶ್ವಾಸ, ದೃಢತೆಗಳಿಂದಾಗಿ ಸ್ತ್ರೀಯರಿಗಲೆ ಅಪರಿಚಿತವಿದ್ದ ಆಧ್ಯಾತ್ಮಿಕ ದಾರಿಯಲ್ಲಿ ಸ್ವಾನುಭವದಿಂದಲೇ ಘನತೆಗೇರಿರುವ ಒಬ್ಬ ಸಾಧಕಿಯಾಗಿ ಅಕ್ಕನ ಬದುಕನ್ನು ನಾವು ಕಾಣಬಹುದಾಗಿದೆ. ಭಕ್ತಿಭಾವದ ತೀವ್ರತೆಯಲ್ಲಿ ಆಕೆ ತನ್ನ ವಚನಗಳಲ್ಲಿ ತೋರಿರುವ ಉತ್ಕಟ ಕವಿತ್ವ ಸಾಮರ್ಥ್ಯ ಕೂಡ ನಮಗೆ ಮುಖ್ಯವಾಗಿದೆ. ಎಲ್ಲಕ್ಕೂ ಮಿಗಿಲಾಗಿ ಭಾರತದ ಸಾಂಪ್ರದಾಯಿಕ, ಕೌಟುಂಬಿಕ ವ್ಯವಸ್ಥೆಯ ಇತಿಮಿತಿಗಳನ್ನು ಪ್ರಶ್ನಿಸಿ ಆಧ್ಯಾತ್ಮಿಕ ಪರ್ಯಾಯವನ್ನು ಹುಡುಕುವ ದಿಕ್ಕಿನತ್ತ ಮಹಾನ್ ಹೋರಾಟವನ್ನು ನಡೆಸಿದ ಆಕೆಯ ಬದುಕು, ಬರಹ, ಸಾಧನೆಗಳಲ್ಲಿ ಇಂದಿಗೂ ನಮಗೆ ಪ್ರಸ್ತುತವಾಗಿವೆ ಎನ್ನುವುದನ್ನು ಮನಗಾಣಬೇಕಾಗಿದೆ. ಆಕೆಯು ಬದುಕಿದ್ದ ಕಾಲದಿಂದಲೂ ತುಂಬಾ ದೂರವಿರುವ ನಾವು ಸಮಕಾಲೀನ ಪರಿಸರದ ಸ್ತ್ರೀ ವಿಮುಕ್ತಿಯ ಆಂದೋಲನದ ಹಲವಾರು ಸಂದಿಗ್ಧ ಅಂಶಗಳನ್ನು ಗೊಂದಲ ಹಾಗೂ ಪ್ರಗತಿಯ ಎಳೆಗಳನ್ನು ಅರ್ಥಮಾಡಿಕೊಳ್ಳಲು ವೀರಶೈವ ಚಳುವಳಿಯು ಸ್ತ್ರೀ ಪ್ರಗತಿಯ ಚರಿತ್ರೆಯನ್ನು ಮತ್ತು ಅದರಲ್ಲಿ ಅಕ್ಕಮಹಾದೇವಿ ನಿರ್ವಹಿಸಿದ ಪಾತ್ರಗಳ ಬಗ್ಗೆ ಸೂಕ್ಷ್ಮವಾಗಿ ಚಿಂತಿಸಬೇಕಾದ್ದು ಈ ಯುಗದ ಅವಶ್ಯಕತೆ ಕೂಡ ಆಗಿದೆ.

ಆಧ್ಯಾತ್ಮಿಕ ಚಳುವಳಿಯಲ್ಲಿ ಸ್ತ್ರೀಯರ ಸಾಧನೆಗಳನ್ನು ಚರ್ಚಿಸುವಾಗಲೆಲ್ಲಾ ತಾನು ಹೆಣ್ಣೆಂಬ ಪ್ರಜ್ಞೆಯನ್ನು ಮೀರಿ, ತಾನೊಂದು ಚೈತನ್ಯವೆಂಬ ಅರಿವನ್ನು ಬೆಳೆಸಿಕೊಂಡ ಅಕ್ಕಮಹಾದೇವಿಯ ಮಾದರಿಯನ್ನು ಅಂದಿನ ಸ್ತ್ರೀಯರ ಸಾಧನೆಯ ಮುಖ್ಯ ಲಕ್ಷಣವೆಂದು ಹೇಳಲಾಗುತ್ತದೆ. "ಹೆಣ್ಣು ಹೆಣ್ಣಾದಂತೆ ಗಂಡಿನ ಸೂತಕ" ಎಂದ ಅಕ್ಕನದು ದೈಹಿಕ ಭಿನ್ನತೆಯನ್ನು ಮೀರಿದ ಸಾಧಕ ಸ್ಥಿತಿಯ ನಿಲುವು. ಈ ಅರಿವಿನಿಂದ ಇಹಪರ ನಾಸ್ತಿಯಾದ ಸಾಧನೆ ಸಾಧ್ಯವಾಯಿತೆಂದು ಆಕೆ ಹೇಳುತ್ತಾಳೆ. ಅಕ್ಕನಂತೆ ಇತರ ಅನೇಕ ವಚನಕಾರ್ತಿಯರೂ ತಮ್ಮನ್ನು ಲಿಂಗಾತೀತ ನೆಲೆಯಲ್ಲಿ ಚೈತನ್ಯವಾಗಿ ಗುರುತಿಸಿಕೊಂಡು, ತಮ್ಮ ಲೌಕಿಕ ಬಂಧನದಿಂದ ಪಾರಾಗಲು ಯತ್ನಿಸುತ್ತಾಳೆ. ಇದು ಭಾವನಾವಾದದ ಒಂದು ಅತ್ಯಂತಿಕ ನೆಲೆ. ವ್ಯಕ್ತಿಯಾಗಿ ತನ್ನನ್ನು ತಾನು ಮೀರುವ ಹಾದಿಯಲ್ಲಿ ಮುಖ್ಯವಾಗಬಹುದಾದದ್ದು. ಆದರೆ ಲೌಕಿಕದಲ್ಲಿ ಬದುಕುತ್ತಲೇ, ಬದುಕಿನ ಸುಮದರ ಅನುಭವಗಳತ್ತ ಕೈಚಾಚುತ್ತ ಇಲ್ಲಿ ಹಾಸು ಹೊಕ್ಕಾಗಿರುವ ಅಸಮಾನತೆಯ ಕುರೂಪಿ ಅಂಶಗಳಿಗೆ ಮೂಲವಾದ ಪರಿಸ್ಥಿತಿಗಳನ್ನು ಬದಲಾಯಿಸಬಯಸುವ ಮತ್ತು ಇಹದೊಳಗೇ ಪ್ರೀತಿ, ವಿಶ್ವಾಸ, ಅಂತಃಕರಣ ತುಂಬಿದ ಪರ್ಯಾಯ ವ್ಯವಸ್ಥೆಯನ್ನು ಕಟ್ಟಲು ಬಯಸುವ ಆಧುನಿಕ ಸ್ತ್ರೀ ಸಂವೇದನೆಗೆ ಅಕ್ಕಮಹಾದೇವಿಯ ಮಾದರಿ ಯಾವ ರೀತಿ ಅರ್ಥವಾದೀತು ಎಂಬುದನ್ನು ಗಮನಿಸಬೇಕು. ಆಕೆಯ ವೈರಾಗ್ಯದಲ್ಲಿ ತಮ್ಮ ಮಾದರಿ ಕಾಣುವವರು ಬೇಕಾದರೆ ಆ ದಿಕ್ಕನ್ನು ಅರಸಲಿ ಆದರೆ ಬದುಕಿನ ಎಲ್ಲಾ ಮಾನವೀಯ

ಸಂಬಂಧಗಳ ಅರ್ಥಪೂರ್ಣತೆಗಾಗಿ ಬಯಸುವವರಿಗೆ ಅಕ್ಕನ ದಿಟ್ಟತನ ಅನುಭವಕ್ಕೆ ಆಕೆ ತನ್ನನ್ನು ಒಡ್ಡಿಕೊಂಡ ಧೀರತೆ, ಅಭಿವ್ಯಕ್ತಿಯಲ್ಲಿನ ಪ್ರಾಮಾಣಿಕತೆಗಳೂ ಆಕೆಯ ಆತ್ಮ ಶೋಧನಾ ಗುಣವೂ ನಿಜವಾಗಿ ಮಾದರಿಯಗಬಲ್ಲವು.

ಅಂದು, ಇಂದು, ಮುಂದು, ಎಂದೆಂದೂ ಅಕ್ಕನ ಸಾಧನೆ, ಗೆಲುವು ಸಮಾಜದ ಮಹಿಳೆಯರಿಗೆ ಮಾರ್ಗದರ್ಶನವ ಮಾಡುತ್ತಿವೆ. ಆತ್ಮ ಸಂಕಲ್ಪವೆಂಬುದೊಂದಿದ್ದರೆ ಸಾಧನೆಯ ಪಥದಲ್ಲಿ ದಿಗ್ವಿಜಯದ ವೀರ ಧ್ವಜವನ್ನು ಎತ್ತಿಹಾರಿಸಲು ಸಾಧ್ಯ. ಒಟ್ಟಾರೆ ಅಕ್ಕನ ಲೌಕಿಕ ಬದುಕಿನ ಅನೇಕ ಸಮಸ್ಯೆಗಳನ್ನು ತಮ್ಮ ಆಧ್ಯಾತ್ಮಶಕ್ತಿಯಿಂದ, ತನ್ನ ವಿವೇಕಕ್ಕನುಸಾರವಾಗಿ ಗೆದ್ದು, ಮಹಾದೇವಿಯಾಗಿ ಬೆಳೆದು, 'ಅಕ್ಕಮಹಾದೇವಿ', 'ಮಹಾದೇವಿಯಕ್ಕ" ಆದಳು. ಜಡ ಕದಳಿಯನ್ನು ತೊರೆದು, ಚೈತನ್ಯಮಯ ನಿತ್ಯನಿರಂತರ. ಹಚ್ಚ ಹಸಿರಾದ ಕದಳಿಯಾಗಿ, ಕದಳಿಯಲ್ಲಿಯೇ ಹರನನ್ನು ಕಂಡುಕೊಂಡ ಅದ್ಭುತ ಸಾಧಕಿ' ಶ್ರೇಷ್ಠ ಅನುಭಾವಿ. ಜಗಕ್ಕೆ 'ಅಕ್ಕ' ಆದಳು. ಮಹಾದೇವಿಯಕ್ಕ ಇದು ಅಕ್ಕಮಹಾದೇವಿಯ ಜೀವನವೇ ಒಂದು ಮಹಾಕಾವ್ಯವಾಗಿ ನಿಂತಿದೆ.

*   *   *

ಗುರುಲಿಂಗ ಜಂಗಮರ ಪೂಜೆಯನ್ನು ಮಾಡುತ್ತ ಲಿಂಗಮುಖಿಯಾಗಿ ಮಲ್ಲಯ್ಯನನ್ನು ಅನನ್ಯ ಭಾವಭಕ್ತಿಗಳಿಂದ ಧ್ಯಾನಿಸುತ್ತಾ ಭಕ್ತಿ ಪಥವೇ ಮುಕ್ತಿ ಪಥಕ್ಕೆ ಸಮಾರ್ಗವೆಂದು ತಿಳಿದು ನಡೆಯುತ್ತಿರುವ ಅಕ್ಕ ಈಗ ೧೬ ವರ್ಷದ ಹದಿಹರೆಯದ ಯೌವ್ವನೆ. ಪ್ರಕೃತಿ ದತ್ತ ಸಹಜ ಚೆಲ್ವಿಕೆಯನ್ನು ಹೊತ್ತು ಹುಟ್ಟಿದ ಅಕ್ಕನ ಚೆಲುವು ಇಮ್ಮಡಿ, ಮೂರ್ಮಡಿಯಾಗಿ ದ್ವಿಗುಣಗೊಂಡಿತ್ತು. ನಿಂಬೆಹಣ್ಣಿನ ಮೈಬಣ್ಣ, ಹವಳದ ಕೆಂಪಿನ ಕೆಂದುಟಿಗಳು, ಸಂಪಿಗೆ ಎಸಳಿನ ನಾಸಿಕ, ಕಾಮನಬಿಲ್ಲನ್ನು ಹೋಲುವ ದಟ್ಟ ಕಪ್ಪಿನ ಹುಬ್ಬುಗಳು, ಹರವಾದ ಹಣೆ, ವಿಶಾಲವಾದ ಕರ್ಣಗಳು, ಕಮಲದಳಗಳಂತೆ ಒಪ್ಪುತ್ತಿರುವ ಕಣ್ಣುಗಳು, ಮೇಲ್ ಧರಿಸಿದ ವಿಭೂತಿ, ರುದ್ರಾಕ್ಷಿಗಳ ಆಭರಣಗಳು, ರಂಗಿಸಿ ಚಂದನದ ಬೊಟ್ಟು, ಹಾಲಬಿಳುಪಿನ ಅಂಬರದ ಉಡುಗೆಯಿಂದ ನೋಡುವವರ ಕಣ್‌ಮನಗಳು ತುಂಬಿ ಬರುವಂತಿತ್ತು.

ಆ ಚೆಲ್ವಿಕೆಯ ಕಂಡು ನಸು ನಾಚಿದ್ದ ತನ್ನ ಚೆಲುವು ಹೆಚ್ಚಿನದೆಂದು ಬಗೆದು ಬೀಗುತ್ತಿದ್ದ ಬಾಳೆಗಿಡವು ಅಕ್ಕನ ಮುಂಗಾಲಿನ ಬಿಳಿ ಬಣ್ಣವನ್ನು ಕಂಡು ಬೆರಗಾಗಿತ್ತು. ಮಹಾದೇವಿಯ ಸೌಂದರ್ಯದ ವರ್ಣನೆಯನ್ನು ಈ ಕವನದಲ್ಲಿ ರಸವತ್ತಾಗಿ ಕಾಣಬಹುದು.

> "ಇಂತುತ್ತುರೋತ್ತರ ಲಾವಣ್ಯರಸಭರಿತ ಸುಕುಮಾರಾವಯವಂಗಳ
> ವಿಲಾಸಂದಳೆದು ತುಳುಂಕದ ಪೂರ್ಣ ಸುಖದಂತೆ
> ಮೀಸಲಳಿಯದ ಮನೋರಥದಂತೆ ಬಾಸಣಿಸಿದ ಮೃತದಂತೆ
> ಮುದ್ರಿಸಿದ ಪುಣ್ಯದಂತೆ ಮೂಡಿದ ಭಕ್ತಿಯಂತೆ, ಕೂಡಿದ
> ಪೂಜೆಯಂತೆ, ಕಾಮನ ಬಾಣದಂತೆ, ಸೋಮನ ಕಿರಣದಂತೆ
> ವಸಂತನ ವಶೀಕರಣದಂತೆ ವನಕುಮಿಯ ಭಾಗ್ಯದಂತೆ
> ಮಳೆಯಾನಿಳನ ಮದದಂತೆ ಯೌವ್ವನ ಮದೋನ್ಮತ್ತ ವಿಳಾಸವಿಭ್ರಮ.
> ಕಳಾಪರಿಪೂರ್ಣ ಶರೀರೆಯಾಗಿರ್ದುಡುತಡಿಯ ಮಹಾದೇವಿಯರು...."

ಅಂಥ ಅಸಮ ಚೆಲುವ ಹೊಂದಿದವರನ್ನೆಲ್ಲಾ ಸಾಮಾನ್ಯವಾಗಿ ಕಾಮಿನಿಯರೆಂದು ಕರೆಯುವುದುಂಟು. ಅವರು ಕಾಮನ ವಶವಾಗಿ ಅವನ ಪ್ರತಿರೂಪವೇ ತಾವಾಗಿ ನಿರಂತರವೂ ಲಲನಾತ್ಮಕತೆಯಲ್ಲಿ ತಮ್ಮ ಮನಸ್ಸನ್ನು ಹರಿಬಿಟ್ಟಿರುತ್ತಾರೆ. ಆದರೆ ಅಕ್ಕ ಚಿಕ್ಕಂದಿನಿಂದಲೇ ಸರ್ವತ್ಯಾಗ ಪರಿಪೂರ್ಣೆ , ನಿಷ್ಕಳಂಕ, ನಿರ್ಮಲೆ, ನಿರ್ಮಾಯೆ, ನಿತ್ಯ ಪರಿಪೂರ್ಣೆ, ನಿಜಗುಣೆ, ನಿರಹಂಕಾರಿ, ನಿತ್ಯ ನಿರಂಜ್ಯೋಗಿಯಾಗಿದ್ದ ಆಕೆ ಲಿಂಗಪ್ರಾಣಿ. ಸದಾಸನ್ನಿಹಿತೆ, ಭಕ್ತಿ ಚರಿತೆ, ಶಿವಜ್ಞಾನ ಸಂಪನ್ನೆ, ಸಕಲಕಳಾಕೋವಿದೆ, ಅಂಬಿಕೆಯ ಚಿತ್ಕಳೆ.

---

ಅಕ್ಕಮಹಾದೇವಿ ಚರಿತ್ರೆಯ 'ಯಾವನ' ಭಾಗದಲ್ಲಿ ಉಲ್ಲಿಖಿತವಾಗಿರುವ ವಚನ

ಹುಟ್ಟು ವೈರಾಗಿಯಾಗಿದ್ದರೂ, ಕಾಮನ ಸ್ಪರ್ಶ ತನಗಾಗದಿರಲೆಂದು ದೇವರಲ್ಲಿ ಮೊರೆಯಿಡುತ್ತಿದ್ದಳು. ಮಾಯೆಯ ನೆರಳಿನಿಂದ ಅಕ್ಕನಿಗೆ ಅಕಾಲಿಕ ಮರೆವು, ತೊಂದರೆ ಉಂಟಾಗಿರಬಹುದೆಂಬ ಸಂಶಯವು ಈ ಕೆಳಗಿನ ವಚನಗಳಿಂದಲೇ ಗೋಚರಿಸುತ್ತದೆ.

"ನಾ ಹುಟ್ಟಿದಲ್ಲಿ ಸಂಸಾರ ಹುಟ್ಟಿತು
ಸಂಸಾರ ಹುಟ್ಟಿದಲ್ಲಿ ಅಜ್ಞಾನ ಹುಟ್ಟಿತು
ಅಜ್ಞಾನಿ ಹುಟ್ಟಿದಲ್ಲಿ ಆಶೆ ಹುಟ್ಟಿತು
ಆಶೆ ಹುಟ್ಟಿದಲ್ಲಿ ಕೋಪ ಹುಟ್ಟಿತು
ಆ ಕೋಪಾಗ್ನಿಯ ತಾಮಸಧ್ರೂಮ ಮುಸುಕಿದಲ್ಲಿ
ನಾ ನಿಮ್ಮ ಮರೆಯ ಭವ ದುಃಖಕ್ಕೀಡಾದೆ
ನೀ ಕರುಣದಿಂದೆತ್ತಿ ಎನ್ನ ಮರಹ ವಿಂಗಡಿಸಿ
ನಿಮ್ಮ ಪಾದವನರುಹಿಸಯ್ಯಾ ಚೆನ್ನಮಲ್ಲಿಕಾರ್ಜುನಾ ॥"

'ಅಹಂ' ಹುಟ್ಟಿನೊಂದಿಗೆ ಸಂಸಾರ, ಅಜ್ಞಾನ, ಆಸೆ, ಕೋಪ, ತಾಮಸಗಳು ಹುಟ್ಟಿಕೊಂಡವು. ಆ ಕೋಪಾಗ್ನಿಯ ತಾಮಸದ ಹೊಗೆಯ ಮುಸುಕಿನಲ್ಲಿ ನಾ ನಿಮ್ಮ ನೆನಹ ಮರೆತೆ. ನಿಮ್ಮ ಮರೆತು ದುಃಖಕ್ಕೀಡಾದೆ. ಕರುಣದಿಂದೊಮ್ಮೆ ನೋಡಿ ನಿನ್ನ ಮರೆವನ್ನು ಮನ್ನಿಸಿ ನಿಮ್ಮ ಪಾದವನ್ನು ತೋರಯ್ಯ ತಂದೆ.

ಮನದ ಮುಂದಣ ಆಶೆಯೇ ಮಾಯೆಯಾಗಿದ್ದರೂ, ಅದರ ರೂಪ ಕ್ರಿಯೆಗಳನ್ನು ಬೇಧಿಸಲಾಗದು. ಜನರ ಜೀವನದ ವಿವಿಧತೆಯೊಂದಿಗೆ ವಿವಿಧ ರೂಪಾಗಿ ನಿಲ್ಲಬಲ್ಲದು.

"ಕಾಯಕ್ಕೆ ನೆಳಲಾಗಿ ಕಾಡಿತ್ತು ಮಾಯೆ,
ಪ್ರಾಣಕ್ಕೆ ಮನವಾಗಿ ಕಾಡಿತ್ತು ಮಾಯೆ,
ಮನಕ್ಕೆ ನೆನಹಾಗಿ ಕಾಡಿತ್ತು ಮಾಯೆ,
ನೆನಹಿಂಗೆ ಮರಹಾಗಿ ಕಾಡಿತ್ತು ಮಾಯೆ,
ಅರುಹಿಂಗೆ ಅರುವಾಗಿ ಕಾಡಿತ್ತು ಮಾಯೆ
ಜಗದದ ಜಂಗುಳಿಗೆ ಬೆಂಗೋಲನೆತ್ತಿ ಕಾಡಿತ್ತು ಮಾಯೆ.
ಚೆನ್ನಮಲ್ಲಿಕಾರ್ಜುನಾ,
ನೀನೊಡ್ಡಿದ ಮಾಯೆಯನಾರೂ ಗೆಲಲಾಗದು !"

ಮಲ್ಲಯ್ಯನು ಮುಂದು ಮಾಡುವ ಮಾಯೆಯನ್ನು ಗೆಲ್ಲುವುದು ಅಸಾಧ್ಯ. ಅದು ದೇಹದ ನೆಳಲಾಗಿ, ಜೀವಕ್ಕೆ ಮನವಾಗಿ, ಮನಕ್ಕೆ ನೆನಪಿನ ಸುಳಿಯಾಗಿ, ಆ ಸುಳಿವಿಂಗೆ ತಿಳುವಳಿಕೆಯನ್ನಿತ್ತು ಅರುಹಿಗೆ ಮರೆವಿನ ಕಟ್ಟನ್ನು ಕಟ್ಟಿ ಕಾಡಿ ಕಂಗೆಡಿಸುವುದು.

"ಹರಿಯ ನುಂಗಿತ್ತು ಮಾಯೆ, ಅಜನನ ನುಂಗಿತ್ತು ಮಾಯೆ,
ಇಂದ್ರನ ನುಂಗಿತ್ತು ಮಾಯೆ, ಚಂದ್ರನ ನುಂಗಿತ್ತು ಮಾಯೆ,
ಬಲ್ಲೆನೆಂಬ ಬಲುಗೈಯರ ನುಂಗಿತ್ತು ಮಾಯೆ,
ಅರಿಯೆನೆಂಬ ಅಜ್ಞಾನಿಗಳ ನುಂಗಿತ್ತು ಮಾಯೆ,
ಈರೇಳು ಭುವನಾವರಡಿಗೊಂಡಿತ್ತು ಮಾಯೆ,
ಚೆನ್ನಮಲ್ಲಿಕಾರ್ಜುನಾ ಎನ್ನ ಮಾಯವ ಮಣಿಸು ಕರುಣಿ !"

ಇಂದ್ರ, ಚಂದ್ರಾದಿಗಳನ್ನೇ ನುಂಗಿದ ಮಾಯೆಯು ಎನ್ನನೇನ ಮಾಡುವುದೋ ಅರಿಯೆ ಈ ಮಾಯೆಯನ್ನು ಬಿಡಿಸಿ ಕರುಣೆದೋರು.

"ಎನ್ನ ಮಾಯದ ಮದವ ಮುರಿಯಯ್ಯಾ
ಎನ್ನ ಕಾಯದ ಕತ್ತಲೆಯ ಕಳೆಯಯ್ಯಾ
ಎನ್ನ ಜೀವದ ಜಂಜಡವ ಮಣಿಸಯ್ಯಾ
ಎನ್ನ ದೇವ ಚೆನ್ನಮಲ್ಲಿಕಾರ್ಜುನಯ್ಯಾ
ಎನ್ನ ಸುತ್ತಿದ ಪ್ರಪಂಚದ ಬಿಡಿಸಾ ನಿಮ್ಮ ಧರ್ಮ"

ಎನ್ನ ಮಾಯದ ಗರ್ವವನ್ನು ಮುರಿದು, ದೇಹದ ಮೋಹದ ಅಂಧಕಾರವನ್ನು ಕಳೆದು ಜೀವನದ ಜಂಜಾಟವನ್ನು ತೋರೆಸಿ, ಸುತ್ತಿಕೊಂಡ ಪ್ರಪಂಚದ ಬಲೆಯನ್ನೇ ಹರಿದು ರಕ್ಷಿಸು ಎಂದು ಕೇಳುವಳು. ಆ ಮಾಯೆಯು ದೃಷ್ಟಿ ಭಾವಗಳನ್ನು ಮರೆಸಿ, ಅರಿವಿನ ಕಿರಣವನ್ನೇ ನುಂಗಿ ನೀರು ಕುಡಿಯುವುದು ಜೀವಕ್ಕಿರುವ ತನುಮನಂಗಳನ್ನು ಮಾಯೆಯು ಆವರಿಸಿಕೊಂಡಿರುವಾಗ ನಿಮ್ಮ ನೆನೆವುದು ಹೇಗೆ ?

ಸಂಸಾರ ಪಾರಮಾರ್ಥಗಳೆರಡನ್ನೂ ಹಿಡಿಯಲಾಗದು, ಅದು ಬಿಲ್ವ ಬೆಳವಲ ಕಾಯನೊಂದಾಗಿ ಹಿಡಿಯಲು ಪ್ರಯತ್ನಿಸಿದಂತಾಗುತ್ತದೆ. ಅದಕ್ಕೆ ಒಳ್ಳೆಯ ಪ್ರತಿಫಲ ದೊರೆಯಲಾರದು.

ಮಾಯೆಯಿಂದ ಹುಟ್ಟಿದ ಸಂಸಾರವು ತನ್ನ ಪ್ರಖರತೆಯ ಬಿಸಿಯನ್ನು ಪರಿಪರಿಯಿಂದ ಜೀವಕ್ಕೆ ಕೊಟ್ಟಿರುವ ದಂಡುಗವನ್ನು ಇಲ್ಲಿ ಕಾಣಬಹುದಾಗಿದೆ.

"ಕಲ್ಲ ಹೊಕ್ಕಡೆ ಕಲ್ಲ ಬರಸಿದೆ, ಗಿರಿಯ ಹೊಕ್ಕಡೆ ಗಿರಿಯ ಬರಸಿದೆ
ಭಾಪು ಸಂಸಾರವ ಬೆನ್ನಿಂದ ಬೆನ್ನು ಹತ್ತಿ ಬಂದೆ.
ಚೆನ್ನಮಲ್ಲಿಕಾರ್ಜುನಯ್ಯಾ ಇನ್ನೇವೆ ನಿನ್ನೇವೆ ?"

"ಬೆಂದ ಸಂಸಾರ ಬೆಂಬಿಡದೆ ಕಾಡಿಹುದಯ್ಯಾ ಏವೆನೇವೆನಯ್ಯಾ ಅಂದಂದಿನ ದಂಡುಗಕ್ಕೆ ಏವನೇವೆನಯ್ಯಾ ?"

"ಬೆಂದ ಒಡಲ ಹೊರೆವುದಕ್ಕೆ ನಾನಾರೆ
ಚೆನ್ನಮಲ್ಲಿಕಾರ್ಜುನಯ್ಯಾ, ಕೊಲ್ಲುಕಾಯಿ ನಿಮ್ಮ ಧರ್ಮ
ಸಂಸಾರವೆಂಬ ಹಗೆಯಯ್ಯಾ ಎನ್ನ ತಂದೆ
ಎನ್ನ ವಂಶ ವಂಶದಪ್ಪದೆ ಆರಿಸಿಕೊಂಡು ಬರುತ್ತಿದೆಯಯ್ಯಾ
ಎನ್ನುವನರಸಿಯರಸಿ ಹಿಡಿದು ಕೊಲ್ಲುತ್ತಿದೆಯಯ್ಯಾ
ನಿನ್ನ ನಾ ಮರೆಹೊಕ್ಕ ಕಾಯಯ್ಯಾ
ಎನ್ನ ಬಿನ್ನಪವನವಧರಿಸಾ ಚೆನ್ನಮಲ್ಲಿಕಾರ್ಜುನಾ."

ಎಲ್ಲಿ ಹೋದೆನೆಂದರೆ ಅಲ್ಲಿಗೆ ಬೆನ್ನಟ್ಟಿ ಬರುತ್ತಿರುವ ಸಂಸಾರವನ್ನು ಏನೆಂದು ಹೇಳಲಿ ಹಗೆಯಾಗಿ ಹರಿಬಿಡುವ ದುಃಖ ದುಮ್ಮಾನಗಳನ್ನು ನಾನೆಂತು ಸೈರಿಸಲಿ, ಅಂದಿನಂದಿಗೆ ಒದಗಿ ಬರುವ ದುರ್ಘಟನೆ, ದುರಾಚಾರ, ದುರಾಲೋಚನೆಗಳನ್ನು ಸುಟ್ಟು, ಮಾಯಾ ಸಂಸಾರವ ಹರಿದೊಗೆದು ನಿಮ್ಮ ನೆನಹಿನೊಳಗಿರ್ದು ನಿಮ್ಮ ಕಾಣುವಂತೆ ಆಶೀರ್ವದಿಸುವುದು ನಿಮ್ಮ ಧರ್ಮ. ಇನ್ನೂ ಮುಂದುವರೆದು ಅದು ತನುವಿನ ಸತ್ವವನ್ನು ಮರೆಸಿ ಮನಸ್ಸಿನ ವಿರಕ್ತಿಯನ್ನು ಕೆಡಿಸುವುದು, ಸತ್ಯ ವಿರಕ್ತಿಗಳೆರಡನ್ನೂ ಕಾಪಾಡಿ ನಿಮ್ಮ ಪಾದವ ತೋರೆಂದು ಬೇಡಿಕೊಳ್ಳುವಳು.

ಅಕ್ಕ ವೈರಾಗ್ಯ ನಿಧಿ ಅದನ್ನು ಯಾರಿಂದಲೂ ಅಲುಗಿಸಲಾಗದು ಭೂಮಿಯ ಮೇಲೆ ಹುಟ್ಟಿ ಬಂದ ಬಳಿಕ ಜನರ ಮಧ್ಯೆ ಇದ್ದು. ಬದುಕು ಸಾಗಿಸುವಲ್ಲಿ ಕಿಂಚಿತ್ತೂ ಮಾಯೆಯ ನೆರಳು ಬರಬಾರದೆಂಬ ಉದ್ದೇಶದಿಂದ ಅಕ್ಕ ತನ್ನ ದೇವರಲ್ಲಿ ಮೊರೆಯಿಟ್ಟಿರಬಹುದಾದ ಪ್ರಸಂಗವು ಇರಬಹುದು ಪಾರಮಾರ್ಥದಲ್ಲಿ ಪ್ರಪಂಚವನ್ನು ಸೃಷ್ಟಿಸಿಕೊಂಡಳಾದರೂ ಸಮಾಜವನ್ನು ತೊರೆದು ದಟ್ಟಾರಣ್ಯದಲ್ಲಿ ಕಣ್ಮುಚ್ಚಿ ಕುಳಿತುಕೊಳ್ಳುವ ಉದ್ದೇಶ ಅವಳದಾಗಿರಲಿಲ್ಲ. ತನ್ನೊಂದಿಗೆ ಜಗದ ಜನರ ಜಗತ್ತಿನ ಶ್ರೇಯಸ್ಸನ್ನು ಬಯಸಿದ ಹಿರಿಜೀವ ಅವಳದು. ಕಾಣುವ ಕಣ್ಣಿದ್ದರೆ, ಕೇಳುವ ಕಿವಿಗಳಿದ್ದರೆ, ಮಾಡುವ ಮನಸ್ಸಿದ್ದರೆ ಶುದ್ಧಭಾವದಿಂದ ಜನ್ಮ ಸಾರ್ಥಕ ಮಾಡಿಕೊಳ್ಳಲಿ ಎಂಬುದು ಆಕೆಯ ಅಭಿಮತ.

ಅಕ್ಕಮಹಾದೇವಿಯನ್ನು ಕಂಡುಕೇಳಿದ ಸುತ್ತಮುತ್ತಲಿನ ಗ್ರಾಮದ ಜನರು ವಧು ಪರೀಕ್ಷೆಯನ್ನರ ನಿರ್ಮಲ ಸುಮತಿಯರಲ್ಲಿಗೆ ಬರುತ್ತಿದ್ದರು. ಬೆಳೆದುನಿಂತ ಮಗಳನ್ನು ಕಂಡು ಬರುವ ವರನ ತಂದೆ – ತಾಯಿಗಳಿಗೆ ಯಾವ ಉತ್ತರವನ್ನು ಹೇಳಬೇಕೆಂದು ತಿಳಿಯುತ್ತಿರಲಿಲ್ಲ. ಕಾರಣ ಮಗಳು ಮಲ್ಲಯ್ಯನೇ ತನ್ನ ಗಂಡನೆಂದು ನಂಬಿರುವ ಸತ್ಯವನ್ನು ಅರಿತಿದ್ದರು. ವಿವಾಹದ ವಿಷಯದಲ್ಲಿ ಒತ್ತಾಯ ತರಲು ಇಚ್ಛಿಸುತ್ತಿರಲಿಲ್ಲ. ಅದಕ್ಕಾಗಿ ಪರೀಕ್ಷೆಗಾಗಿ ಬರುತ್ತಿದ್ದ ಸರ್ವರಿಗೂ

ಅವಳನ್ನೊಂದು ಮಾತು ಕೇಳಿ ತಿಳಿಸುವೆವು ಎಂದು ಹೇಳುತ್ತಿದ್ದರು. ಎಲ್ಲರ ಸಹಕಾರ ಸಮ್ಮತಿ ಅಕ್ಕನಿಗಿದ್ದರೂ ಕಾಲ ಮುನಿಸಿಕೊಂಡಿದ್ದನೇನೋ ಎಂಬಂತೆ ಕೌಶಿಕ ರಾಜನ ದೃಷ್ಟಿತಾಗಿತ್ತು.

ಬೆಳಗಿನ ಜಾವದಲ್ಲೊಂದು ದಿನ ರಾಜನು ವಿಹಾರವನ್ನು ಮುಗಿಸಿಕೊಂಡು ಮರಳುತ್ತಿದ್ದನು. ರಾಜನೆಂದ ಮೇಲೆ ಕೇಳಬೇಕೆ ? ವೈಭವದ ಮೆರವಣಿಗೆಯೇ ಹೊರಟಿತ್ತು. ಕಾಲುದಳಗಳ ಸಾಲು ಶಿಸ್ತಿನಿಂದ ಮುಂದೆ ಸಾಗಿತ್ತು. ಆನೆ ಕುದುರೆಗಳು ಎಡಬಲಗಳಲ್ಲಿ ಸಾಗಿ ಬರುತ್ತಿದ್ದವು. ದಾರಿಯುದ್ಧಕ್ಕೂ ಪುಷ್ಪದಳಗಳ ಸುರಿಮಳೆ ನಡೆದಿತ್ತು. ಕಾಳಿ ಕೊಂಬುಗಳ ಧ್ವನಿ ಕಿವಿಗಳಿಗೆ ಭರದಿಂದ ಕೇಳಿ ಬರುತ್ತಿತ್ತು. ಅದರೊಂದಿಗೆ ಆನೆಯ ಮೇಲೆ ಅಂಬಾರಿಯನ್ನಿಟ್ಟು ರಾಜ ಸರ್ವಾಲಂಕಾರಭೂಷಿತನಾಗಿ ದರ್ಪದಿಂದ ಪವಡಿಸಿದ್ದನು. ಊರ ಜನರ ಮುಂದೆ ಮೆರೆಯುವುದೊಂದು ಅಭಿಮಾನವಲ್ಲವೇ ?

ಅರಸನು ಮೆರವಣಿಗೆ ಹೊರಟಿರುವನೆಂದ ಬಳಿಕ ರಾಜವೈಭವವನ್ನು ನೋಡಬೇಕೆಂದು ಆತುರ, ಆಸೆ ಸಹಜ. ಗೆಳತಿಯರ ಒತ್ತಾಯದ ಮೇರೆಗೆ ಅಕ್ಕ ಹೊರಬಾಗಿಲ ಮುಂದೆ ಗೆಳತಿಯರ ಮಧ್ಯೆ ನಿಂತುಕೊಂಡಿದ್ದಳು. ನೆರೆದ ಜನಸ್ತೋಮವನ್ನು ಅತ್ತಿತ್ತ ನೋಡುತ್ತಲಿದ್ದ ಅರಸು, ಗುಂಪಿನೊಂದಿಗೆ ನಿಂತ ಅಕ್ಕನನ್ನು ಕಂಡು ಬೆರಗಾದನು. ನಕ್ಷತ್ರ ಪುಂಜದ ಮಧ್ಯೆ ಕಂಗೊಳಿಸುವ ಚಂದಿರನ ಸೊಬಗನ್ನು ಕಂಡನು. ಅವನ ಆಸೆ ನೆಟ್ಟದೃಷ್ಟಿಯನ್ನು ಕೀಳದಂತೆ ಮಾಡಿತು. ಅರಸನ ಕಾಕ ದೃಷ್ಟಿಗೆ ಗುರಿಯಾದವರ ಗತಿ ಬಲು ಕೆಟ್ಟದ್ದೆಂದರಿತ ಅಕ್ಕ ಗೆಳತಿಯರೊಂದಿಗೆ ಮರೆಯಾದಳು. ಮೆರವಣಿಗೆ ಸಾಗುತ್ತಿದ್ದರೂ ಕೌಶಿಕನ ಮನಸ್ಸು ಬವೇರೊಂದು ನೆನೆದು ಬಸವಳಿದು ಕಾರಣ ಬೆಳಗಿನ ಉತ್ಸಾಹ ಅರಗಳಿಗೆಯಲ್ಲಿ ಕರಗಿ ನೀರಾಯಿತು. ಅಕ್ಕನ ಚೆಲುವ ಪಡೆದು ಸುಖ ವಿಲಾಸದಲ್ಲಿ ಓಲಾಡಬೇಕೆಂಬ ಉತ್ಕಟ ಆಸೆಯನ್ನು ಹೊತ್ತನು. ಅದನ್ನು ಪೂರೈಸಿಕೊಳ್ಳುವ ಪರಿಯನ್ನು ಕಾಣದೆ, ಅನ್ನ, ನೀರನ್ನು ತೊರೆದು ವಿಶ್ರಮಿಸಿದನು. ಮಂತ್ರಿ ಮಹಾಶಯರಿಗೆ ರಾಜನ ರೀತಿಯು ಸೋಜಿಗವೆನಿಸಿದರೂ ಸತ್ಯವೇನೆಂಬುದನ್ನು ಅರಿಯಲು ಅಂತಃಪುರಕ್ಕೆ ಹೋಗಿ ತಮ್ಮ ಮನಸ್ಸಿನಲ್ಲಿ ಉಂಟಾದ ದಂದುಗವನ್ನು ತಿಳಿಯಪಡಿಸಿದರೆಂದು ಮನವಿ ಮಾಡಿಕೊಂಡರು. ಪುರದೊಳ್ ಇರುತಿಹ ಸುಮತಿ ನಿರ್ಮಲರ ಏಕೈಕ ಪುತ್ರಿ, ಚೆಲುವೆ, ಚಂದ್ರಮುಖಿ ಅಕ್ಕಮಹಾದೇವಿಯನ್ನು ಮದುವೆ ಮಾಡಿಕೊಡಲು ಕೇಳಿರಿ ಎನ್ನುವರು. ಇದು ಉಗುಳಲಾರದ, ನುಂಗಲು ಬಾರದ ಗಂಟಲಿನಲ್ಲಿಯ ಬಿಸಿ ತುಪ್ಪ ಒಪ್ಪಿಗೆಯ ನೀಡಿ ಕರೆತರುವೆನೆಂದರೆ ಶಿವಭಕ್ತರವರು, ಶಿವಪೂಜಕರು, ಲಿಂಗವೇ ಪತಿಯೊಂದು ಮಲ್ಲಯ್ಯಾನಲ್ಲಿ ಇಂಬುಗೊಂಡವರು. ನಿರಾಕರಿಸಿದೆಡೆ ರಾಜಾಜ್ಞೆಗೆ, ರಾಜಲಾಂಛನಕ್ಕೆ ಅಗೌರವ ತೋರಿಸಿದ ಪಾತಕ ನಾನಾಗಬೇಕಾಗುವುದು. ರಾಜನ ಕ್ರೂರ ದೃಷ್ಟಿಗೆ ಬಲಿಯಾಗಬೇಕಾಗುವುದು. ಇಬ್ಬಗೆಯ ಸಂಕಟದಲ್ಲಿ ಸಿಲುಕಿ ಮಂತ್ರಿ ಮೈ ಬೆವರಿದ. ವಿಧಿಯಿಲ್ಲದಲೆ ರಾಜಭಟನೋರ್ವನನ್ನು ನಿರ್ಮಲರ ಮನೆಗೆ ಆಭರಣ, ದನಕನಕಗಳ ಸಮೇತ ಕಳುಹಿಸಿದನು. ಮಹಾದೇವಿಯಾ ರಾಜನೆಂದರೆ ಪ್ರಜಾರಕ್ಷಕ, ಧರ್ಮರಕ್ಷಕ, ರಾಜಾ ಪ್ರತ್ಯಕ್ಷ

ದೇವತಾ ಎಂದೆಲ್ಲಾ ತಿಳಿದಿದ್ದಳು. ಅದಕ್ಕೆ ವ್ಯತಿರಿಕ್ತವಾಗಿ ನಡೆದ ಘಟನೆಯನ್ನು ಕಂಡು ದಿಗ್ಭ್ರಮೆಗೊಂಡಳು.

"ಒಲೆಹತ್ತಿಯುರಿದೊಡೆ ನಿಲಬಹುದಲ್ಲದೆ
ಧರೆಯತ್ತಿಯುರಿಯೊಡೆ ನಿಲಬಾರದು, ಏರಿ
ನೀರುಣ್ಬೊಡೆ, ಬೇಲಿಕೆಯ್ಯ ಮೇವೊಡೆ
ನಾರಿ ತನ್ನ ಮನೆಯಲ್ಲಿ ಕಳುವೊಡೆ ತಾಯ
ಮೊಲೆವಾಲು ನಂಜಾಗಿ ಕೊಲುವೊಡೆ ಇನ್ನಾರಿಗೆ
ದೂರುವೆ ಕೂಡಲಸಂಗಮದೇವಾ ?"

ಅಣ್ಣನವರ ವಚನದಲ್ಲಿ ಸತ್ಯವಿದೆ. ಏನಾದರೂ ಸಹಿಸಿಕೊಳ್ಳಬಹುದು. ಬೇಲಿಯೇ ಎದ್ದು ಹೊಲ ಮೇಯ್ದರೆ, ತನ್ನ ಮನೆಯಲ್ಲಿ ತಾನೇ ಕಳುವನ್ನು ಮಾಡುವ ನಾರಿಯಿದ್ದರೆ, ಸ್ತನಾಮೃತವು ವಿಷವಾಗಿ ಕಂದನನ್ನು ಕೊಂದರೆ ಸಹಿಸುವುದೆಂತು ? ಪ್ರಜಾರಕ್ಷಕನಾಗಿರಬೇಕಾದ ಅರಸು ಪ್ರಜಾಪಕ್ಷಕನಾಗಿ ಸದಾ ವಿಷಯಾಸಕ್ತ ವಿಲಾಸದಲ್ಲಿ ಮೈಮರೆತರೆ ರಾಜ್ಯದ ಘನತೆ ಗೌರವಗಳನೆಂತು ಕಾಪಾಡುವನೆಂದು ಚಿಂತಿಸುತ್ತಿದ್ದಳು. ಸೇವಕನಿಂದ ವಿಷಯವು ನಿರ್ಮಲ ಸುಮತಿಯರಿಗೆ ಗಂಟಲ ಒತ್ತಿ ಹಿಡಿದಂತೆ, ಒಡಲೊಳ್ ಇರಿದಂತೆ, ಹೃದಯದ ಘಾಸಿ ಮಾಡಿದಂತಾಗಿತ್ತು.ದ ಮರು ಉತ್ತರವ ನುಡಿಯಲಾಗದೆ ಒತ್ತಿ ಬಂದ ದುಃಖ, ನೋವು, ಸಂಕಟವನ್ನು ತಹಬಂದಿಗೆ ತರಲು ಪ್ರಯತ್ನಿಸುತ್ತಿದ್ದರು. ಕೊನೆಗೆ ಶಿವಭಕ್ತಳವಳು, ಶಿವನೊಲುಮೆಯವಳು, ಭವಿಗೆ ಕೊಡಮಾಡುವುದಿಲ್ಲ ಎಂದು ತಿಳಿಸಿದರು. ಭವಿನಾನಾಗಿರ್ದಡೇನಂತೆ ರಾಜ್ಯದ ಸಿರಿಸಂಪತ್ತಿಗೆಲ್ಲಾ ಒಡತಿಯಾಗುವಳು ಸುಖದ ಸುಪ್ಪತ್ತಿಗೆಯಲ್ಲಿ ಹೂವಂತೆ ನೋಡಿಕೊಳ್ಳುವೆ. ಸಾಮೋಪಾಯದಿ ಒಲುಮೆಯ ನುಡಿ ಹೇಳಿ ಒಲಿಸಿರಿ. ಇಲ್ಲದಿರ್ದಡೆ ದಂಡೋಪಾಯವ ವಿಧಿಸುವುದಾಗಿ ರಾಜಾಜ್ಞೆಯನ್ನು ತಿಳಿಸಿ ಕರೆತನ್ನಿರೆಂದು ನುಡಿದನು. ಆ ಸಮಯದಿ ಅಕ್ಕನ ಚೆಲ್ವಿಕೆಯ ಸಾರವನ್ನು ಪಡೆಯಬೇಕೆಂಬ ದುರಾಶೆಯಲ್ಲಿ ಮದಾಂಧನಾಗಿ ಮುಂದುವರೆದನು.

ರಾಜದೂತರೊಂದಿಗೆ ಬಂದ ಮಂತ್ರಿಯನ್ನು ಗೌರವಾದರಗಳಿಂದ ಬರಮಾಡಿಕೊಳ್ಳುವರು. ಮನೆಯ ಬಾಗಿಲಿಗೆ ಕೊಲ್ಲುವ ಕಡು ವೈರಿ ಬಂದರೂ ಒಳ ಬಾ ಎಂದು ಕರೆಯಬೇಕು" ನಡೆ ನುಡಿ ಶುದ್ಧವಿದ್ದವರ ಮಾತಿದು ! ಒಳಗೆ ಅಡಿಯಿಟ್ಟ ಮಂತ್ರಿ ತಾ ಬಂದ ಕಾರಣವನ್ನು ತಿಳಿಸಿ ಮಗಳನ್ನು ಅರಸನಿಗೆ ಕೊಟ್ಟು ಮದುವೆ ಮಾಡಿದರೆ ರಾಜ್ಯದ ಸಿರಿಸಂಪತ್ತಿಗೆ ಒಡತಿಯಾಗಿರುವಳು. ನಿಮಗೂ ಧನಕನಕಗಳು ದೊರೆತು ಸುಖದಿಂದರಲು ಸಾಧ್ಯವಾಗುವದು.

ಇಲ್ಲದಿದ್ದರೆ ಸೆರೆಮನೆಯ ವಾಸ ತಪ್ಪದು. ಮುಂದುವರೆದು ನಿಮ್ಮ ಬಲಿಯನ್ನು ತೆಗೆದುಕೊಳ್ಳಲು ಹಿಂಜರಿಯಲಾರೆನು ಎಂದೂ, ಅದು ರಾಜಾಜ್ಞೆ ಎಂದೂ ತಿಳಿ ಹೇಳುವನು.

ಮುಪ್ಪಿನಲಿ ಬಂದೊದಗುವ ದುರ್ಮರಣವನ್ನು ನೆನೆದು ಬಲು ನೊಂದುಕೊಳ್ಳುವರು. ತಂದೆ, ತಾಯಿಗಳ ರಕ್ಷಣೆ ನನ್ನ ಧರ್ಮ, ಯಾವುದಕ್ಕೂ ಹಿಂದೇಟು ಹಾಕದೇ ಮುನ್ನುಗ್ಗಬೇಕು. ಮೋಹದ ವಯೋನ್ಮತ್ತ ಆನೆಯನೇರಿದ ಅರಸನಿಗೆ ಬುದ್ಧಿಕಲಿಸಬೇಕೆಂದು ತಾ ಮುಂದೆ ಬರುವಳು. ಮಂತ್ರಿಗಳೇ, ತಾವು ಹಿರಿಯರು, ಪ್ರಜಾಸತ್ತಾತ್ಮಕರು ರಾಜ್ಯಾಡಳಿತದ ಸೂತ್ರವನ್ನು ಹಿಡಿದವರು. ಅಂಥವರೇ ಕೆಳಮಟ್ಟಕ್ಕಿಳಿದರೆ ಉಳಿದವರ ಗತಿ ಏನೆಂಬುದ ಅರಿಯಲಾರಿರಾ ? ಅದೇನೆ ಇರಲಿ ಎನ್ನಣತಿ ಯಂದದಿ ನನ್ನ ನುಡಿಗಳನ್ನು ನಡೆಸುವುದಾದರೆ ನಿಮ್ಮ ಅರಸನನ್ನು ತೊರೆದು, ಅರಮನೆಯ ಬಿಟ್ಟು ಹೊರಬರುವೆನು. ಮಗಳ ಧೈರ್ಯ, ನಿರ್ಧಾರಗಳು ತಂದೆ – ತಾಯಿಗಳನ್ನು ನಿಬ್ಬೆರಗುಗೊಳಿಸುವುವು. ಭವಿಯ ಕೂಡಿ ನೀನೇನ ಸುಖಪಡುವೆ ತಾಯೆ ಎಂದು ಕಣ್ಣೀರು ಸುರಿಸುವರು. ಒಂದೆಡೆ ಮಗಳೆಂಬ ಮಮತೆ ವಾತ್ಸಲ್ಯ, ಇನ್ನೊಂದೆಡೆ ದುರ್ಮರಣದ ದುಮ್ಮಾನ ಇಬ್ಬಗೆಯ ಸಂಕಟದಿ ಬೆಂದು ಬೆಂಡಾದರು. ಹೆತ್ತ ಕರುಳಿನ ಶ್ರೇಯಸ್ಸಿಗಾಗಿ ತಂದೆ ತಾಯಿಯರ ಹೋರಾಟ, ಜನ್ಮವಿತ್ತವರ ರಕ್ಷಣೆಗಾಗಿ ಮುಂದಡಿಯಿಟ್ಟ, ಅಕ್ಕನ ಅಭಯ ಎರಡನ್ನೂ ಕಣ್ಣಾರೆ ಕಾಣುತ್ತಿದ್ದ ಮಂತ್ರಿಯು ಮಮ್ಮಲ ಮರುಗುವನು.

ಹೇಳು ತಾಯೇ ನಿನ್ನ ಶಪಥವ ಚಾಚು ತಪ್ಪದೇ ನಡೆದುಕೊಳ್ಳಲು ತಿಳಿಸುವೆನೆಂದು ಅರಹುವನು. ಮಂತ್ರಿಗಳೇ ನಾನು ಲಿಂಗಧಾರಿಯೂ, ಲಿಂಗಮುಖಿ, ಲಿಂಗಪೂಕಗಳು. ಅದಕ್ಕಾಗಿ ಅರಸು ಕೌಶಿಕನು ಭವಿ ಎಂಬುದು ಬಿಟ್ಟು ಭಕ್ತನಾಗಬೇಕೆಂದು ನೋಡಬಹುದು. ಮತ್ತೆ ಕೌಶಿಕ "ನನ್ನ ಮನ ತಿಳಿದಂತೆ ಯಾವ ಕಾಲಕ್ಕಾದರೂ ಲಿಂಗ ಪೂಜೆಯ ಗೈಯ್ಯುವೆ, ಶರಣ ಸತಿ ಲಿಂಗ ಪತಿ ಎಂಬುದು ಮರೆಯಲಾಗದು".

"ಉಡುವೆ ನಾನು ಲಿಂಗಕ್ಕೆಂದು, ತೊಡುವೆ ನಾನು ಲಿಂಗಕ್ಕೆಂದು,
ಮಾಡುವೆ ನಾನು ಲಿಂಗಕ್ಕೆಂದು, ನೋಡುವೆ ನಾನು ಲಿಂಗಕ್ಕೆಂದು
ಎನ್ನಂತರಂಗ ಬಹಿರಂಗಗಳು ಲಿಂಗಕ್ಕಾಗಿ !
ಮಾಡಿಯೂ ಮಾಡದಂತಿಪ್ಪೆ ನೋಡಾ ಆ ನನ್ನ
ಚೆನ್ನಮಲ್ಲಿಕಾರ್ಜುನನೊಳಗಾಗಿ
ಹತ್ತರೊಡನೆ ಹನ್ನೊಂದಾಗಿಪ್ಪಾದನೇನ ಹೇಳುವೆನಪ್ಪಾ !"

ನಂತರ ಜಂಗಮಸೇವೆ ನಿರಂತರವೂ ನಡೆಯಬೇಕು. ಬೊಕ್ಕಸದ ಧನಕನಕಗಳು ವಿನಿಯೋಗಿಸಲ್ಪಡಬೇಕು.

- "ನಾನುಣ್ಣದ ಮುನ್ನವೇ ಜಂಗಮಕ್ಕೆ ಅಮೃತಾನ್ನಾದಿ ನೈವೇದ್ಯವ ನೀಡುವೆ".

- "ನಾನಾಡದ ಮುನ್ನವೆ ಜಂಗಮಕ್ಕೆ ದೇವಾಂಗಾದಿ ವಸ್ತ್ರವನುಡಿಸುವೆ".
- "ನಾನು ಹೂಸದ ಮುನ್ನವೆ ಜಂಗಮಕ್ಕೆ ಸುಗಂಧಾದಿ ಪರಿಮಳ ದ್ರವ್ಯದ ಹೂಸುವೆ".
- "ನಾನು ಮುಡಿಯದ ಮುನ್ನವೆ ಜಂಗಮಕ್ಕೆ ಪರಿಪರಿಯ ಪುಷ್ಪವ ಮುಡಿಸುವೆ".
- "ನಾನು ತೊಡಿಗೆಯ ತೊಡದ ಮುನ್ನವೆ ಜಂಗಮಕ್ಕೆ ತೊಡಿಗೆಯ ತೊಡಿಸುವೆ".
- "ನಾನಾವ ಭೋಗವ ಭೋಗಿಸದೆ ಜಂಗಮಕ್ಕೆ ಭೋಗಿಸಲಿತ್ತು"
- "ಆಶೇಷಾ ಪ್ರಸಾದವ ಲಿಂಗಕ್ಕಿತ್ತು ಭೋಗಿಸದೆ ಬಳಿಕಲ್ಲಿದೆ ಭೋಗಿಸಿದಂತೆ."

"ಬಸವಣ್ಣಾ ನಿಮ್ಮಾಣೆಯಾ....... "ಇಂತಪ್ಪಾ
ಜಂಗಮವೆನ್ನ ಪ್ರಾಣ, ಜಂಗಮವೆನ್ನ ಜೀವ,
ಜಂಗಮವೆನ್ನ ಪುಣ್ಣದ ಫಲ, ಜಂಗಮವೆನ್ನ ನಿಧಿನಿಧಾನ,
ಜಂಗಮವೆನ್ನ ಹರುಷದ ಮೇರೆ, ಚೆನ್ನಮಲ್ಲಿಕಾರ್ಜುನು,
ಜಂಗಮದ ತಿಂಥಿಣಿಯಲ್ಲಿ ಓಲಾಡುವೆನು."

ಈ ಮೇಲಿನ ನುಡಿಗಳನ್ನು ತಪ್ಪಿದಲ್ಲಿ ನಾನೊಂದರಗಳಿಗೆಯನಲ್ಲಿರಲಾರೆ ಇದು ಸತ್ಯ ನಾನೆಂದು ನುಡಿಯಲ್ಲಿ ಎಚ್ಚೆತ್ತು ನಡೆಯಲ್ಲಿ ತಪ್ಪಲಾರೆ. ನಿಮ್ಮರಸು ತಪ್ಪಿದರೆ ಎನ್ನ ಅಂಗೈಯ ಲಿಂಗವು ಘಟಸರ್ಪವಾಗಿ ನಿಲ್ಲದೆ ಬಿಡದು ಎಚ್ಚರಿಕೆ.

ಹಗಲು ಎಂಬುದನ್ನು ಅರಿಯದೆ ಕನಸು ಕಾಣುತ್ತಿದ್ದ ಅರಸು ತನ್ನ ಮಂಚದ ಬದಿಯಲ್ಲಿ ನಿಂತ ದಾಸಿಯನ್ನೇ ಅಕ್ಕನೆಂದು ತಿಳಿದು ಅಪ್ಪಿಕೊಳ್ಳುವನು. ನಿಜದ ಅರಿವಾದಾಗ ತನ್ನ ತಪ್ಪಿಗೆ ಸೇವಕಿಯ ಜರಿಯುವನು. ಕ್ಷಣವೊಂದು ಯುಗವಾಗಿ ತೋರುವುದು. ಅಕ್ಕನ ಅಣತಿಯನ್ನು ತಿಳಿದು ಆನಂದದಿಂದ ಕುಣಿದು ಕುಪ್ಪಳಿಸುವನು. ಒಪ್ಪಿಗೆಯ ನೀಡಿದುದೆ ಹೆಜ್ಜೇನ ಸವಿದಂತಾಯಿತು. ಹೆಣ್ಣವಳು ಬಲು ಬಿನ್ನಾಣದಿಂದ ತನ್ನ ಅಣತಿಯನಿಟ್ಟು ನುಡಿಯ ಹೇಳಿರುವಳು. ಒಲಿದು ನನ್ನರಮನೆಗೆ ಬರಲಿ ಮೊದಲು, ಮುಂದಾಗುವುದನ್ನು ನೋಡಿದರಾಯಿತು ಎಂದು ಅಕ್ಕನ ನಿಲುವನ್ನು ನೀರಿಗಿಂತ ತೆಳುವಾಗಿ ತಿಳಿದುಕೊಳ್ಳುವನು. ಭವಿಯಾದ ಅರಸು ಭಕ್ತನಾಗುವುದಾದರೆ ಅರಮನೆಗೆ ಹೋಗುವಲ್ಲಿ ತಪ್ಪಿಲ್ಲವೆಂಬ ಸುವಿಚಾರ ಅಕ್ಕಮಹಾದೇವಿಯದು.

ಸಕಲ ರಾಜ ಮರ್ಯಾದೆಯಿಂದ ಕರೆತರಲು ಮೇರೆಯನ್ನು ತಂದಿದ್ದರು. ರೇಷ್ಮೆ ಉಡುಗೆ, ವಜ್ರದ ಆಭರಣಗಳು, ತರ – ತರದ ಪುಷ್ಪಗಳು ತಾಲಿಯನ್ನು ತುಂಬಿಕೊಂಡಿದ್ದವು. ಆದಾವುದನ್ನೂ ಧರಿಸದೆ ತನ್ನ ನಿತ್ಯ ಉಡುಪಿನಲ್ಲಿ ಕಾಲ್ನಡಿಗೆಯೆಂದದಿ ಅರಮನೆಯತ್ತ ಸಾಗಿ

ಬಂದಳು. ತಂದೆ – ತಾಯಿ, ಸ್ನೇಹಿತೆಯರು, ಪುರದ ಜನರೆಲ್ಲರೂ ಕೌಶಿಕನಿಗೆ ಹಿಡಿ ಶಾಪವನ್ನು ಹಾಕುವವರೆ. ಒದಗಿ ಬಂದ ಸಂಕಟಕ್ಕೆ ಕಣ್ಣೀರಿನ ಕಾಣಿಕೆಯ ಕೊಡುತ್ತಿದ್ದರು. ಅವರೆಲ್ಲರನ್ನೂ ಕಂಡ ಅಕ್ಕಮಹಾದೇವಿ ಧೃತಿಗೆಡದೆ ಸಂತೈಸುವಳು. ನಾಳೆ ಬಪ್ಪುದು ನಮಗಿಂದೇ ಬರಲಿ, ಇಂದು ಬಪ್ಪುದು ನಮಗೀಗಲೇ ಬರಲಿ ಅದಕ್ಕಂಜಲಾಗದು, ಅಳುಕಲಾಗದು, ಪರಶಿವನ ಕರುಣೆಯೊಂದಿದ್ದರೆ ನಮ್ಮನೇನು ಮಾಡುವರು ?

ಭವಿಯ ಸಂಗವನೊಪ್ಪಿ ಅರಸು ಮನೆಗೆ ಬಂದ ಅಕ್ಕನ ತನುಮನಗಳು ಲಿಂಗ, ಪೂಜೆ, ಜಂಗಮ ದಾಸೋಹದಲ್ಲಿ ಕ್ಷಣಕಾಲ ಬಿಡುವಿಲ್ಲದಂತೆ ಬೆರತು ಹೋದವು. ರಾಜ ವೈಭೋಗಗಳಲ್ಲಿ ಅಳಿದು ಧಮ ಕಾರ್ಯಗಳು ನಿರ್ವಿಘ್ನವಾಗಿ ನಡೆದವು. ಅರಮನೆಯೊಂದು ದೇವಮಂದಿರವಾಯಿತು. ಕಲ್ಯಾಣದಿಂದ ಜಂಗಮರು ಅಕ್ಕಮಹಾದೇವಿಯಿಂದ ಸೇವೆಗೈಯಲು ತಂಡ – ತಂಡವಾಗಿ ಬರತೊಡಗಿದರು. ಚರ ಮೂರ್ತಿಗಳ ದಾಸೋಹದಲ್ಲಿ ತನ್ನಿರುವನ್ನೇ ಮರೆಯುವಂತಾದಳು. ಈ ದೃಶ್ಯವು ರಾಜನಿಗೆ ನುಂಗಲಾರದ ತುತ್ತಾಗಿತ್ತು. ಅಕ್ಕನ ಮನದಂದದಿ ನಡೆದರೆ ಮುಂದೆ ಒಲಿಯುವಳೆಂಬ ಆಸೆ. ಅವಳಾದರೂ ಎಷ್ಟು ದಿನ ಪೂಜೆ – ಪುನಸ್ಕಾರಗಳನ್ನು ಮಾಡುವಳು ಆದರೆ ಎಷ್ಟೊಂದು ದಿನ, ವಾರ, ತಿಂಗಳು, ವರುಷ, ಜನುಮಂಗಳು ಪೂಜಿಸಿದರೂ ಹಿಂಗದ ದಾಹ ಅಕ್ಕನದು.

ಲಿಂಗಪೂಜೆ, ಜಂಗಮ ದಾಸೋಹ, ದಾನ – ಧರ್ಮಗಳು ಯಾವ ಅಡೆತಡೆಯಿಲ್ಲದೆ ನಡೆದಿದ್ದರೂ ಅರಮನೆಯ ವಾಸ ಅಕ್ಕನಿಗೆ ಗಂಟಲಿನಲ್ಲಿಯ ಬಿಸಿ ತುಪ್ಪದಂತಾಗಿತ್ತು. ಆ ಬದುಕು ತೆರಣಿಯ ಹುಳುವಿನ ರೀತಿಯಲ್ಲಿತ್ತು. ಮನಸ್ಸಿಗೆ ತಿಳಿದಂತೆ ನಡೆದಿರುವೆ, ದುರಾಸೆಯಾಗಿರ್ದಡೆ ಅದನ್ನು ಕಳೆದು ಪ್ರತ್ಯಕ್ಷನಾಗು ಎಂದು ಕೇಳಿ ಕೊಳ್ಳುವಳು. ಮನಃಸಾಕ್ಷಿಯಲ್ಲಿ ಕೂದಲೆಳೆಯಷ್ಟು ಕಲ್ಮಶವನ್ನೂ ಕಾಣದ ಅಕ್ಕ "ಎನಗುಳ್ಳದೊಂದು ಮನ ಆ ಮನವ ನಿಮ್ಮಲ್ಲಿ ಸಿಲುಕಿದ ಬಳಿಕ ಎನಗೆ ಭಯವುಂಟೆ" ಎಂದು ಪ್ರಶ್ನಿಸುವಳು.

ಇಂದಿಗೆ ಅವಳ ಒಲುಮೆ, ನಾಳೆಗೆ ಅವಳ ಒಲುಮೆ ಎಂದು ದಿನಗಳೆಣಿಸುತ್ತ ಕಾಲ ಕಳೆಯುವ ಕೌಶಿಕನ ಸೈರಣೆ ಎಲ್ಲೆ ಮೀರಿತ್ತು. ತನ್ನ ಆಸೆಯನಿಂದು ಈಡೇರಿಸಿಕೊಳ್ಳಬೇಕೆಂದು ಅಕ್ಕಮಹಾದೇವಿಯನ್ನು ಓಲೈಸುವನು.

ಭಕ್ತನಾಗಿರ್ದೊಡೆ ಎನ್ನಭ್ಯಂತರವಿರಲಿಲ್ಲ "ಅಂಗದ ಮೇಲೆ ಲಿಂಗವ ಧರಿಸದೆ ಎನ್ನ ಮುಟ್ಟಿದುದು" ಮೊದಲ ವಚನವ ಬಿಟ್ಟೆ ಎಂದು ಹೇಳುವಳು.

ಶಿವಧರ್ಮಗಳಿಲ್ಲದವರೊಡನೆ ನುಡಿಯಲಾಗದು. ನೋಡಲಾಗದು, ನಾ ಮಾಡಿದ ಹಿಂದಣ ಧರ್ಮದ ಫಲವೇ ನನಗೀ ರೂಪದಿ ಹಿಂಸಿಸುತ್ತದೆ. ಆ ಕರ್ಮದ ಪಾಶವದೆಂದು ಕಳೆಯುವೆ ಎಂದು ಲಿಂಗಪೂಜೆಯಲ್ಲಿ ತಲ್ಲೀನಳಾಗುವಳು.

"ಮೋಹವುಳ್ಳಲ್ಲಿ ಮೆಚ್ಚುವಂತೆ ಮಾಡಯ್ಯಾ,

ಮೋಹವುಳ್ಳಲ್ಲಿ ಕರುಳವ ಕೊಯ್ಯಯ್ಯಾ,

ಮೋಹವುಳ್ಳಲ್ಲಿ ಬೆರಳುವ ಕುಡಿಯಯ್ಯಾ,

ಚೆನ್ನಮಲ್ಲಿಕಾರ್ಜುನ ದೇವಯ್ಯಾ

ನೊಂದೆನೆಂದಡೆ ಮರಕತ ಮಾಡಯ್ಯ"

ಎನ್ನ ತಪ್ಪಿದಲ್ಲಿ ನೀನಾದ ಶಿಕ್ಷೆಯನ್ನು ಕೊಟ್ಟರೂ ಅನುಭವಿಸುವೆ ಅದನ್ನು ಎನಗೆ ತೋರಿ ಮುಂದೆ ಆ ತಪ್ಪು ಮಾಡದಂತೆ ಕರುಣಿಸು.

ಮಹಾಂಧಕನಾದ ಅರಸು ಅಕ್ಕಮಹಾದೇವಿಯ ಮನ ಒಲಿಸಲು ಸಖಿಯರನ್ನು ಕಳುಹಿಸುವನು. ಸುಖ ಭೋಗ ಲಾಲಸೆಯ ರುಚಿಯನ್ನು ಅಲ್ಪಸ್ವಲ್ಪ ಅನುಭವಿಸುತ್ತಿದ್ದ ಸೇವಕಿಯರು ಅಕ್ಕನ ಮನದ ಅಂತರಾತ್ಮದ ಭಾವನೆಯನ್ನು ತಿಳಿಯದವರಾಗಿದ್ದರು. "ಉಣ್ಣೆ ಕಚ್ಚಲೊಳಿದ್ದ ಉಣಲರಿಯದು ನೊರೆವಾಲು" ಆ ಉಣ್ಣೆಯ ಪರಿಸ್ಥಿತಿ ಅವಳದು, ಸುಂದರಾಂಗ, ಹದಿಹರೆಯದ ತರುಣ, ಮೇಲಾಗಿ ಅರಸು ಅಂಥವನ ಸಂಗವನ್ನು ತೊರೆದು ಗುರುಲಿಂಗ ಜಂಗಮರ ದಾಸೋಹದಲ್ಲಿ ಸನ್ಯಾಸಿನಿಯಂತೆ ಕಾಲ ನೂಕುತ್ತಿರುವಳು. ಅದು ಅವರಿಗೆ ವಿಪರ್ಯಾಸವಾಗಿ ಕಾಣುವುದು. ವೈಭೋಗ ತನ್ನೆದುರು ತನ್ನ ವಶದಲ್ಲಿದ್ದರೂ, ಮನ ವಿಕಾರಗೊಳ್ಳದೆ ಶಾಂತ ಚಿತ್ತಳಾಗಿದ್ದವಳ ಕಂಡು ಮಹಾಮಹಿಮಳಿವಳು ಎಂದರಿತು ಮನದಲ್ಲಿ ವಂದನೆಗಳನ್ನು ಸಲ್ಲಿಸುತ್ತಿದ್ದರು.

ರಾಜನ ಆಜ್ಞೆಯನ್ನು ಪರಿಪಾಲಿಸುವುದರ ಸಲುವಾಗಿ ಅಕ್ಕ ಕೇಳು ರಾಜನೇನು ಕೆಟ್ಟವನಲ್ಲ. ನಿನ್ನೊಲುಮೆಗಾಗಿ ಕಾಯ್ದು ಕುಳಿತಿರುವನು. ಪ್ರಜೆಗಳ ಹಿತರಕ್ಷಕನವನು, ಚಾಣಾಕ್ಷ ರಾಜನೀತಿಜ್ಞನು, ವೀರನೂ, ಶೂರನೂ, ಅರಿಗಳಿಗೆಂದೂ ಬೆನ್ನು ತೋರಿಸಿ ಅರಿಯನು. ಗೆದ್ದರೆ ಸ್ವಾತಂತ್ರ್ಯ, ಮಡಿದರೆ ವೀರಸ್ವರ್ಗವೆಂದ ರಣರಂಗದಿ ಕಲಿಯಾಗಿ ಕಾದು ವೀರವಿಜಯದ ಪತಾಕೆಯನ್ನು ಹಾರಿಸುವನು. ಅವನ ಮಾತು ಒರಟಾದರೂ ಹೃದಯ ಮೃದು, ಮನಸು ಮಗುವಿನಂತಹದು. ನಿನಗಾಗಿ ಅನ್ನ, ನೀರಿಲ್ಲದೆ ಕೊರಗುತಿಹನೆಂದು ಪರಿಪರಿಯಿಂದ ಹೊಗಳುವಳು. ಅವರೆಲ್ಲರ ಪ್ರಯತ್ನವು ಬೆಟ್ಟಕ್ಕೆ ಕಲ್ಲು ಹೊತ್ತಂತಾಯಿತು.

"ಗಿರಿಯಲ್ಲದೆ ಹುಲ್ಲು ಮೊರಡಿಯಲ್ಲಾಡುವುದೆ ನವಿಲು ?

ಕೊಳಕ್ಕಲ್ಲದೆ ಕಿರುವಳ್ಳಕ್ಕೆಳಸುವುದೆ ಹಂಸೆ ?

ಮಾಮರ ತಳಿರಲ್ಲದೆ ಸರಗೈವುದೆ ಕೋಗಿಲೆ ?

ಪರಿಮಳವಿಲ್ಲದ ಮಷ್ಪಕ್ಕೆಳಸುವುದೆ ಭ್ರಮರ ?

ಎನ್ನದೇವ ಚೆನ್ನಮಲ್ಲಿಕಾರ್ಜುನಂಗಲ್ಲದೆ ಅನ್ಯಕ್ಕೆಳಸುವುದೆ ಎನ್ನಮನ ?

ಪೇಳಿರೆ ಕೇಳದಿಯರಿರಾ ॥"

ತನ್ನ ಮನದಿಂಗಿತವನ್ನು ಹೇಳಿದರೂ ಸಖಿಯರ ಪ್ರಯತ್ನ ನಡೆದೇ ಇತ್ತು. ಅದಾವುದರ ಪರಿವೆ ಅವಳಿಗಿರಲಿಲ್ಲ. ಹೊಗಳಿಕೆ – ತೆಗಳಿಕೆಗಳು ಅಲ್ಪಕಾಲಿಕ. ಅವನನ್ನವನುಂಡು ವಸ್ತ್ರವ ತೊಟ್ಟು ಬದುಕು ಸಾಗಿಸುವಿರಾಗಿ ಅವ ಹೇಳುವ ಕೆಲಸವ ಚಾಚೂ ತಪ್ಪದೆ ನಡೆಸುವುದು ನಿಮ್ಮ ಧರ್ಮ. ಆ ಧರ್ಮವ ನಾ ಅನ್ಯ ಭಾವಿಸಲಾರೆ. ಸಂಸಾರ ಸುಖದೊಳಿರ್ದು ಸುಖಭೋಗಗಳನ್ನು ಪಡೆಯುವಲ್ಲಿ ಶಿವಧರ್ಮದ ಮರ್ಮವನ್ನು ಅರಿಯಬೇಕು. ಶಿವಪೂಜೆಯಲ್ಲ. ಮನವ ನಿಲ್ಲಿಸಿ ಲಿಂಗಪೂಜೆಯ ಮಾಡುತ್ತ ಲಿಂಗಯ್ಯನನ್ನು ಕೊಂಡಾಡುತ್ತ ಶಿವನ ಸಾಯುಜ್ಯವ ಪಡೆಯಬೇಕು. ಆ ಮಾರ್ಗದಲ್ಲಿ ಮುನ್ನಡೆಯುವಾಗ ಎದುರಾಗುವ ಕಷ್ಟ ಕಾರ್ಪಣ್ಯಗಳನ್ನು ಸ್ತುತಿ ನಿಂದೆಗಳನ್ನು ಶಾಂತ ಚಿತ್ತದಿಂದಲೇ ಸಹಿಸಿಕೊಳ್ಳಬೇಕು.

ಬೆಟ್ಟದ ಮೇಲೆ ಮನೆಯ ಮಾಡಿ ಮೃಗಗಳಿಗೆ ಅಂಜಲಾಗದು, ಸಮುದ್ರದ ದಂಡೆಗೆ ಮನೆಯ ಮಾಡಿ ನೊರೆ – ತೊರೆಗಳಿಗೆ ಅಳುಕಲಾಗದು. ಸಂತೆಯೊಳಗೆ ಮನೆಯ ಮಾಡಿ ಕೇಳಿ ಬರುವ ವಿವಿದೋದ್ದೇಶದ ವಿವಿಧ ರೀತಿಯ ಮಾತುಗಳಿಗೆ ನಾಚಿ ಕರ್ಣಗಳನ್ನು ಮುಚ್ಚಿಕೊಳ್ಳಲಾಗದು. ಮನಸ್ಸಿದ್ದಲ್ಲಿ ಮಾರ್ಗವಿರುವಂತೆ ಲೋಕದಲ್ಲಿ ಹುಟ್ಟಿ ಬಂದ ಬಳಿಕ ಬರಬಹುದಾದ ಹೊಗಳಿಕೆ – ತೆಗಳಿಕೆಗೆ ಕೋಪಿಸಿಕೊಳ್ಳಲಾಗದು. ಅವುಗಳಿಗಂಜಿ ಮುಂದಿಟ್ಟ ದಿಟ್ಟ ಹೆಜ್ಜೆಯನ್ನು ಹಿಂದಿಡಲಾಗದು. ಶಾಂತರಾಗಿ ಸುಮನಸ್ಸಿನಿಂದ ನಮ್ಮ ಗುರಿಯ ಸಾಧಿಸಬೇಕು. ಪಡೆದ ಮಾನವ ಜನುಮವನ್ನು ಪರರಿಗಾಗಿ, ಹುಲುಮಾನವರ ಹೊಗಳುವುದರಲ್ಲಿ ವ್ಯರ್ಥ ಮಾಡಬೇಡಿರಿ. ಶಿವನಾಮಸ್ಮರಣೆಯ ಮಾಡಿರೆಂದು ತಿಳಿಸುವಳು. ಅಕ್ಕನ ಮಗುವನ್ನು ಒಲಿಸುವುದು ನಮ್ಮ ಆಳವಲ್ಲ. ಶಿವ ನಿಷ್ಠೆಯಲ್ಲಿ ಛಲದಂಕಮಲ್ಲಳು ಪ್ರಯತ್ನಕ್ಕೆ ಫಲ ದೊರೆಯಲಾರದೆಂದು ನಿರುಪಾಯರಾಗಿ ಹಿಂದಿರುಗುವರು.

ಲಿಂಗಪೂಜೆಯಲ್ಲಿ ನಿರತಳಾದಳೆಮದರೆ ಇಹದ ಬಾಧೆ ಕೊಂಚವೂ ಇರುತ್ತಿರಲಿಲ್ಲ. ಲಿಂಗಯ್ಯನನ್ನು ವಿಭೂತಿ, ರುದ್ರಾಕ್ಷಿ, ಸುಗಂಧ ದ್ರವ್ಯ, ಪರಿಪರಿಯ ಪುಷ್ಪ, ಬಿಲ್ವ ಪತ್ರಿಕೆಗಳಿಂದ ಅಲಂಕರಿಸಿ ಅಂದವನು ಕಣ್ಣಲ್ಲಿ ತುಂಬಿಕೊಳ್ಳುತ್ತಿದ್ದಳು.

ಲಿಂಗಯ್ಯನನ್ನು ಎಷ್ಟೊಂದು ರೀತಿಯಿಂದ ಹೊಗಳಿ ಹಾಡಿದರೂ ದಣಿವಾಗದು.

"ತನು ಕರಗದವರಲ್ಲಿ ಮಜ್ಜನವನೊಲ್ಲೆಯಯ್ಯ ನೀನು
ಮನ ಕರಗದವರಲ್ಲಿ ಪುಷ್ಪವನ್ನೊಲ್ಲೆಯಯ್ಯ ನೀನು
ಹದುಳಿಗರಲ್ಲದವರಲ್ಲಿ ಗಂಧಾಕ್ಷತೆಯನೊಲ್ಲೆಯಯ್ಯಾ ನೀನು
ಅರಿವು ಕಣ್ದೆರೆಯದವರಲ್ಲಿ ಆರತಿಯನೊಲ್ಲೆಯಯ್ಯಾ ನೀನು
ಭಾವಶುದ್ಧವಿಲ್ಲದವರಲ್ಲಿ ಧೂಪವನೊಲ್ಲೆಯಯ್ಯಾ ನೀನು
ತ್ರಿಕರಣ ಶುದ್ಧವಿಲ್ಲದವರಲ್ಲಿ ತಾಂಬೂಲವನೊಲ್ಲೆಯಯ್ಯಾ ನೀನು
ಎನ್ನಲ್ಲಿ ಏನುಂಟೆಂದು ಕರಸ್ಥಲವನಿಂಬುಗೊಂಡೆ ಹೇಳು

ಚೆನ್ನಮಲ್ಲಿಕಾರ್ಜುನಯ್ಯಾ ?"

ಸುಶ್ರಾವ್ಯವಾಗಿ ಹಾಡುತ್ತ ಲಿಂಗಪೂಜೆಯಲ್ಲಿ ಮೈಮರೆತ ಮಹಾದೇವಿಯ ಕಳೆಯ ಚೆಲ್ವಿಕೆಯನ್ನು ಹೊಗಳಲು ಅಸಾಧ್ಯ. ಆ ನೋಟವ ಕಂಡು ಆನಂದ ಪಡಬೇಡ. ವ್ರತ ನಿಯಮಾದಿಗಳನ್ನು ಮಾಡಲಾಗದ ಮನುಜರು ವ್ರತ ಪರಿಪಾಲಕರು ಶಿವಪೂಜೆಯನ್ನು ನೋಡಿ ಭವ ದೋಷಗಳನ್ನು ಪರಿಹರಿಸಿಕೊಳ್ಳಬಹುದು. ಆ ಸುಯೋಗವು ಅರಸು ಕೌಶಿಕನಿಗಿದ್ದರೂ ಮಾಯೆಯ ಪಾಶದಲ್ಲಿ ಸಿಕ್ಕು ಅಂಧಕನಾಗಿದ್ದನು. ಲಿಂಗಪೂಜೆಯ ಸುಖಕ್ಕಿಂತ ಅಂಗ ಸುಖವನ್ನೇ ಹೆಚ್ಚೆಂದು ನಂಬಿದ್ದನು. ತನ್ಮಯಳಾಗಿ ಕುಳಿತ ಅಕ್ಕನನ್ನು ಕಂಡು ತನ್ನ ತಾ ಮರೆತು ಆಲಂಗಿಸ ಹೋಗುವನು. ಎಚ್ಚತ್ತ ಮಹಾದೇವಿ ಲಿಂಗಪೂಜೆಯಲ್ಲಿ ನಿರತಳಾಗಿರುವಾಗ ಎನ್ನಂಗವನಿಡಿದು ಲಿಂಗಪೂಜೆಗೆ ಭಂಗ ತಂದೆಯಾ ನಿನ್ನ ದ್ವಿತೀಯ ನುಡಿಯನ್ನು ತಪ್ಪಿದೆ ಎಂದು ತಿಳಿಸಿದಳು.

ಕೋಪಿಷ್ಟನಾದ ಕೌಶಿಕನು ನೀ ಮಾಡುವ ಲಿಂಗಪೂಜೆ ಎನಗೇನ ಕೊಡುವುದು. ಅದರಿಂದ ದುಃಖ – ದುಮ್ಮಾನಗಳೇ ಹೆಚ್ಚಾಗಿವೆ. ಎನ್ನ ಸುಖವನ್ನು ಮಣಿಸದ ಪೂಜೆ ಪುನಸ್ಕಾರಗಳೆಲ್ಲ ತೃಣ ಸಮಾನ.

"ಗೂಗೆ ಕಣ್ಣ ಕಾಣಲರಿಯದೆ ರವಿಯ ಬಯ್ವುದು
ಕಾಗೆ ಕಣ್ಣ ಕಾಣಲರಿಯದೆ ಶಶಿಯ ಬಯ್ವುದು
ಕುರುಡ ಕಣ್ಣ ಕಾಣಲರಿಯದೆ ಕನ್ನಡಿಯ ಬಯ್ವನು
ಇವರ ಮಾತೆಲ್ಲವೂ ಸಹಜವೆ
ನರಕ ಸಂಸಾರದಲ್ಲಿ ಹೊದಕುಳಿಗೊಳುತ್ತ
ಶಿವನಿಲ್ಲ ಮುಕ್ತಿಯಿಲ್ಲ ಹುಸಿಯಂದಡೆ
ನರಕದಲ್ಲಿಕ್ಕದೆ ಬಿಡುವನೆ ಚೆನ್ನಮಲ್ಲಿಕಾರ್ಜುನಯ್ಯಾ."

ಕಾಗೆ, ಗೂಗೆ, ಕುರುಡರ ಪರಿಸ್ಥಿತಿ ನಿನ್ನದು. ಕಣ್ಣಿದ್ದು ಕುರುಡ, ಕಿವಿಯಿದ್ದು ಕಿವುಡ, ಕಾಲುಗಳಿದ್ದು ಹೆಳವ, ಬುದ್ಧಿಯಿದ್ದು ಅರೆಹುಚ್ಚು, ಭಾಗ್ಯವಿದ್ದು ದೌರ್ಭಾಗ್ಯ ನೀನು ನಿನ್ನೊಡನಾಡಿ ಶಿವ ಲೀಲಾಮೃತವ ಪೇಳುವುದು ಸರಿಯಲ್ಲ ಉಳಿದೊಂದು ನುಡಿಯನ್ನು ಎಚ್ಚರದಿ ಕಾಯ್ದುಕೊಳ್ಳುವುದು ನಿನ್ನ ಧರ್ಮ.

ಯಾವುದಕ್ಕೂ ಅಂಜಳು, ಅಳುಕಳು, ಆಶಿಪಳು, ನಿರಾಶೆಯಾಗಲಾರಳು ಅಂಥವಳ ಸಂಗವ ಪಡೆವುದೆಂತು ಪರಿ ಎಂಬುದೇ ಅರಸನ ಮನಸ್ಸಿನಲ್ಲಿ ವೇದನೆಯಾಗಿತ್ತು. ಹಂಬಲವು ಪ್ರಚೋದನೆಯನ್ನು ಕೊಟ್ಟು ಮುನ್ನುಡಿಯಿಡುವಂತೆ ಮಾಡುತ್ತಿತ್ತು. ಪ್ರಯತ್ನ ಮುಂದುವರೆದಿತ್ತೇ ಹೊರತು ಪ್ರತಿಫಲ ಶೂನ್ಯ ರಾಜ್ಯ ಬೊಕ್ಕಸದ ದ್ರವ್ಯವು ಜಂಗಮರ ದಾಸೋಹಕ್ಕೆ ನೀರಿನಂತೆ

ವಿನಿಯೋಗವಾಗುತ್ತಿತ್ತು. ಚರಮೂರ್ತಿಗಳ ಸೇವೆಯನ್ನು ಮಾಡುತ್ತ ಪರಮಾನಂದವನ್ನು ಹೊಂದುತ್ತಿದ್ದಳು.

ಹೀಗೆ ದಿನಗಳು ಕಳೆದು ಹೋಗುತ್ತಿರಲು ವ್ಯರ್ಥವಾಗಿ ಹಣ ವ್ಯಯವಾಗುತ್ತಿದೆ. ಹೊರತು ಅಕ್ಕನ ಒಲುಮೆ ಹೊರೆಯದಾಗಿದೆಯೆಂಬ ಚಿಂತೆಯಲ್ಲಿ ಕುಳಿತಿರುವಾಗ ಮಧ್ಯರಾತ್ರಿಯಲ್ಲಿ ಜಂಗಮರ ಗುಂಪೊಂದು ಅರಮನೆಯತ್ತ ಬರುತ್ತಿರುವುದನ್ನು ಕಂಡು ತಲೆಬಾಗಿಲಿನಲ್ಲಿಯೇ ಸುಳ್ಳು ಸುಳ್ಳನ್ನು ಹೇಳಿ ಹಿಂದಕ್ಕೆ ಕಳುಹಿಸಿದನು. ಸುದ್ದಿಯನ್ನು ತಿಳಿದ ಅಕ್ಕ ಬಲುನೊಂದು ಅವರನ್ನು ಕರೆಕಳುಹಿಸಿ ತಪ್ಪು ಮನ್ನಿಸಿರೆಂದು ಸೇವೆ ಸಲ್ಲಿಸಿದಳು. ಜಂಗಮ ಪೂಜೆಯಲ್ಲಿ ಮಹಾದೇವಿಗೆ ಅಂಗಹರಿವೆಯ ಪರಿವೆಯೇಯಿರಲಿಲ್ಲ. ಕಂಡ ಚರಮೂರ್ತಿಯು ಅಂಗದುಡಿಗೆಯ ತೊಟ್ಟು ಬಾ ತಾಯೆ ಎಂದು ಹೇಳುವನು. ಉಡುಗೆಯ ಉಟ್ಟುಕೊಳ್ಳಲು ಬಂದ ಅಕ್ಕನ ಸೆರಗನ್ನು ಹಿಡಿದು ನಿನಗ್ಯಾಕೆ ವಸ್ತ್ರದ ಹೊದಿಕೆ ಕಿತ್ತೆಸೆದು ನನ್ನನ್ನೊಮ್ಮೆ ಅಪ್ಪಿಕೊಳ್ಳೆಂದು ಕೇಳಿಕೊಳ್ಳುವನು.

"ಎಮ್ಮೆಗೊಂದು ಚಿಂತೆ, ಸಮ್ಮಗಾರಗೊಂದು ಚಿಂತೆ,
ಧರ್ಮಿಗೊಂದು ಚಿಂತೆ, ಕರ್ಮಿಗೊಂದು ಚಿಂತೆ,
ಎನಗೆ ಎನ್ನ ಚಿಂತೆ, ತನಗೆ ತನ್ನ ಕಾಮದ ಚಿಂತೆ,
ಒಲ್ಲೆ ಹೋಗು, ಸೆರಗು ಬಿಡು ಮರುಳೆ,
ಎನಗೆ ಚೆನ್ನಮಲ್ಲಿಕಾರ್ಜುನ ದೇವರು
ಒಲಿವರೊ ಒಲಿಯರೊ ಎಂಬ ಚಿಂತೆ !"

ಎಂದು ಹೇಳಿದ ಮಹಾದೇವಿ ವಸ್ತ್ರವನ್ನು ಕಿತ್ತೆಸೆದು ದಿಗಂಬರಿಯಾಗಿ ತನ್ನ ಕೇಶದಿಂದ ಅಂಗವನ್ನು ಮುಚ್ಚಿಕೊಳ್ಳುವಳು. ಅರಸನೇ ನಿನ್ನ ಮೂರು ನುಡಿಗಳನ್ನು ತಪ್ಪಿನಡೆದಿರುವೆ. ನಾ ನಿನ್ನ ಅರಮನೆಯಲ್ಲಿ ಇರಲಾರೆ. ನಿನ್ನ ಮನವ ಕೆಡೆಸಿದುದು ನನ್ನೀ ಅಂಗದ ಚೆಲ್ವಿಕೆಯಲ್ಲವೇ ? ಕಣ್ತೆರೆಯ ನೋಡು ಆ ಹೇಯ ಕಾಯದ ನಿಜರೂಪವನ್ನು ತನ್ನ ಮುಂದೆ ನಿಂತ ಅಸ್ಥಿಪಂಜರವನ್ನು ಕಂಡು ಅರಸನು ಭಯಗೊಳ್ಳುವನು. ಬೆಂಕಿಯ ಜೊತೆ ಸರಸವಾಡಲು ಹೋಗಿ ಮೈಮನಗಳನ್ನು ಸುಟ್ಟುಕೊಳ್ಳುವನು.

ಆಗ ಮಹಾದೇವಿ ತನ್ನ ಸೌಂದರ್ಯವನ್ನು ಕುರಿತು ರಕ್ತಮಾಂಸಖಂಡಗಳಿಂದೊಡಗೂಡಿದ, ಎಲವು ಕೀಲುಗಳಿಂದ ಜೋಡಿಸಲ್ಪಟ್ಟ ದೇಹಕ್ಕೆ ತೊಗಲಿನ ಹೊದಿಕೆಯು ಮೆರಗು ಕೊಟ್ಟು, ಕಣ್ ಕೋರೈಸುವರು. ಆದರೆ ಇದು ಮಲಮೂತ್ರ ಕೀವಿನೊಂದೊಡಗೂಡಿದ ಹೊಲಸು ಜಡದೇಹ ಅದನಂಬಿ ಕೆಡಬೇಡ ಶಿವಧರ್ಮವ ಪಾಲಿಸೆಂದು ತಿಳಿಸುವಳು. ಸ್ಥಿರವಲ್ಲದ ಒಡಲ ಸುಖ ಸಂಸಾರವ ನಂಬಿ ಕೆಡದೇ ಪೃಥ್ವಿ, ಅಪ್ಪು,

ತೇಜ, ವಾಯು, ಆಕಾಶಗಳು ಒಂದಾಗುವ ಮುನ್ನ ಮೃಡ ನುಡಿಯ ನಂಬಿ ಚೆನ್ನಮಲ್ಲಿಕಾರ್ಜುನಂಗೆ ಶರಣೆಂದು ಮುಕ್ತಿ ಪಥವ ಪಡೆದುಕೋ.

ಮಹಾದೇವಿ ಅರಮನೆಯನ್ನು ತ್ಯಜಿಸಿ ಹೊರಟಳಾದರೂ ಕೌಶಿಕನಿಗೆ ತಡೆಯಲಾಗಲಿಲ್ಲ. ಕಠೋರ ಸತ್ಯವನ್ನು ಕಣ್ಣಾರೆಕಂಡು ಕೇಳಿದ ಮೇಲೆ ಬಯಲ ಅಪ್ಪುವೆನೆಂದು ಫಲ ತೊಟ್ಟು ಪರಿಯಂತಾಯಿತ್ತು.

ಭವಿ – ಭಕ್ತೆಯರೊಂದಿಗಿನ ಸೆಣಸಾಟ ಯಾವ ಫಲಿತಾಂಶವನ್ನು ಹೊತ್ತು ತರುವುದೆಂದು ಕಾತರಿಸಿ ಕಾಯುತ್ತಿದ್ದ ಜನಸ್ತೋಮವು ಕೇಶಾಂಬರಿಯಾಗಿ ಹೊರಬಂದು ಅಕ್ಕನನ್ನು ಕಂಡು ಜೈಕಾರ ಹಾಕಿದರು. ಬಾಲ್ಯದಿ ನುಡಿಯುತ್ತಿದ್ದ ವೈರಾಗ್ಯದ ನುಡಿಗಳಿಂದು ಸ್ವರೂಪವ ತಾಳಿ ವಿಜಯಶ್ರೀಯನ್ನು ಪಡೆದು ನಿಂತ ಅವಳ ನಿಲುವನ್ನು ಕಂಡು ಬೆರಗಾಗಿ ಶರಣು ಶರಣು ತಾಯೆ ಶರಣು ಹೊಕ್ಕು ಸ್ವಾಗತಗೈದರು. ನಿರ್ಮಲ ಸುಮತಿಯರು ಮುಂದೆ ಬಂದು ಮಗಳೆ ನಿನಗಿನ್ನಾವ ಕಷ್ಟವೂ ಇಲ್ಲ. ಉಂಡುಟ್ಟು ನಿನ್ನ ಮನೆಯಲ್ಲಿ ನೀನಿರುವೆ ಮನೆಗೆ ಬಾ ಎನ್ನುವರು. ತನ್ನ ಬದುಕಿನುದ್ದಕ್ಕೂ ತನ್ನಿಚ್ಛೆಯಲ್ಲಿ ಇರಲೆಂಬುದು ಮಾತ್ರ ಪಿತೃಗಳ ಬಯಕೆ.

ಕವಯತ್ರಿಯರು ಅಕ್ಕಮಹಾದೇವಿಯ ಹೋರಾಟ ಸಾಧನೆ, ಎಲ್ಲವೂ ವೈಯಕ್ತಿಕ ನೆಲೆಯಿಂದ! ಸ್ವಯಂಭೂ ಆಗಿ ತನ್ನ ಆಧ್ಯಾತ್ಮಿಕ ವ್ಯಕ್ತಿತ್ವ ಚಿಂತನೆಗಳನ್ನು ರೂಪಿಸಿಕೊಂಡವಳು. ಅನುಭಾವದ ಔನ್ನತ್ಯವನ್ನು ಮುಟ್ಟಿದವಳು. ಕುಟುಂಬ, ಸಮಾಜ, ಪ್ರಪಂಚ, ರಾಜಾಧಿಕಾರ, ವಿವಾಹ ವ್ಯವಸ್ಥೆಯನ್ನು ವಿರೋಧಿಸಿ, ಪ್ರತಿಭಟಿಸಿ ನಿಂತದ್ದು ಸ್ವಪ್ರೇರಣೆಯಿಂದ ಇವಳ ಪ್ರತಿಭಟನೆಗೆ ಸಮಷ್ಟಿ ಉದ್ದೇಶವಿಲ್ಲ. ಸಮುದಾಯವನ್ನು ಪ್ರತಿನಿಧಿಸುವುದಿಲ್ಲ. ಆದರೆ ಪ್ರತಿಭಟಿಸಲು ಬೇಕಾದ ನೈತಿಕ ಬಲ, ಮಾನಸಿಕ ಸ್ಥೈರ್ಯವನ್ನು ಪಡೆಯಲು ಕಸರತ್ತು ಮಾಡಿದವಳಲ್ಲ.

ಶಿವಭಕ್ತರಾದ ತಂದೆ – ತಾಯಿಗಳಿಗೆ ಮಗಳಾಗಿ ಹುಟ್ಟಿ ಬಾಲ್ಯದಿಂದಲೇ ಭಕ್ತಿ ಮನೋಧರ್ಮವನ್ನು ರೂಢಿಸಿಕೊಂಡು ಮಧುರಭಾವದ ಭಕ್ತಿಮಾರ್ಗವನ್ನು ಆಯ್ದುಕೊಂಡು ತನ್ನ ಕಲ್ಪನೆಯ ಚೆನ್ನಮಲ್ಲಿಕಾರ್ಜುನನನ್ನು ತನ್ನ ಜನ್ಮ ಜನ್ಮಾಂತರದ ಸಂಗಾತಿಯಾಗಿ ಒಪ್ಪಿಕೊಂಡು ಬಿಟ್ಟಿದ್ದರಿಂದ, ಲೌಕಿಕ ಪುರುಷನನ್ನು ಮತ್ತೆ ಗಂಡನಾಗಿ ಸ್ವೀಕರಿಸುವುದು ದ್ವಂದ್ವಕ್ಕೆ ಒಡ್ಡಿಕೊಂಡಂತೆ ಎನಿಸಿದ್ದರಿಂದಲೇ, ಕೌಶಿಕನನ್ನು ನಿರಾಕರಿಸಿ ನಿಲ್ಲುವುದು ಅನಿವಾರ್ಯವಾಗುತ್ತದೆ.

ಕೌಶಿಕನ ಪ್ರಸಂಗ ಅಕ್ಕಮಹಾದೇವಿಯ ಬದುಕಿನ ಸಂದರ್ಭದಲ್ಲಿ ಬಹುಮುಖ್ಯವೆನಿಸುತ್ತದೆ. ಕವಯತ್ರಿಯರು ತಮ್ಮ ಕಾವ್ಯಗಳಲ್ಲಿ ಕೌಶಿಕನ ಪ್ರಸಂಗವನ್ನು ಸ್ವಲ್ಪ ವ್ಯತ್ಯಾಸಗಳೊಂದಿಗೆ ಚಿತ್ರಿಸಿದ್ದಾರೆ.

ಕೆಲವೊಂದು ಕಾವ್ಯದಲ್ಲಿ ಅಕ್ಕಮಹಾದೇವಿ ರುದ್ರಕನ್ನಿಕೆ ಕಾರಣಿಕ ಹೆಣ್ಣು ಕೈಲಾಸದಲ್ಲಿದ್ದವಳು ಕಾರಣಾಂತರದಿಂದ ಭೂಮಿಯಲ್ಲಿ ಹುಟ್ಟುತ್ತಾಳೆ.

ಜನ್ಮದ ಆರಂಭದಿಂದಲೂ ಅವಳು ಶಿವಭಕ್ತೆ. ಪಾರ್ವತಿಯ ಸಾತ್ವಿಕ ಕಳೆಯೇ ಇವಳೆಂಬ ಅಭಿಪ್ರಾಯವೂ ಇದೆ.

ಅವಳು ಕಾರಣಿಕ ಹೆಣ್ಣಾಗಿರಲಿ, ಮನುಷ್ಯಳೇ ಆಗಿರಲಿ ಕೌಶಿಕನೊಂದಿಗೆ ವಿವಾಹವಾದದ್ದನ್ನು ನಮ್ಮ ಆಧುನಿಕ ಕವಯತ್ರಿಯರು ಚಿತ್ರಿಸಿರುವುದು ಅಲ್ಲದೆ, ಅಕ್ಕನ ವಚನಗಳಲ್ಲಿಯೂ ಕೌಶಿಕನೊಂದಿಗಿನ ತನ್ನ ಸಂಬಂಧವನ್ನು, ಅದರಿಂದ ತಾನು ಅನುಭವಿಸಿದ ಮಾನಸಿಕ ಯಾತನೆಯನ್ನು ನಿರೂಪಿಸುವಂತಹ ಸಾಲುಗಳ ಮೂಲಕವಾಗಿಯೂ, ಅಕ್ಕಮಹಾದೇವಿ ಕೌಶಿಕನನ್ನು ಮದುವೆಯಾದ ಅಂಶ ಸ್ಪಷ್ಟವಾಗುತ್ತದೆ.

ಅಕ್ಕಮಹಾದೇವಿ ರಾಜವ್ಯವಸ್ಥೆಯನ್ನು ವಿವಾಹ ವ್ಯವಸ್ಥೆಯನ್ನು, ವಿರೋಧಿಸಿ, ಪ್ರತಿಭಟಿಸಿ, ಧಿಕ್ಕರಿಸಿದ್ದನ್ನು ಎಲ್ಲ ವಿಮರ್ಶಕರೂ ಗುರ್ತಿಸಿದ್ದಾರೆ.

ಆಧುನಿಕ ಕವಯತ್ರಿಯರು ಇವಳ ಈ ನಿಲುವನ್ನು ವೈಭವೀಕರಿಸಿ ಹೊಗಳಿದ್ದಾರೆ. ಆದರೆ ಅಕ್ಕಮಹಾದೇವಿ ವಿವಾಹವನ್ನು ವಿರೋಧಿಸಿದ್ದು ಕೌಶಿಕ ಭಕ್ತನಲ್ಲವಾದ್ದರಿಂದ ಹಲವು ಕವಯತ್ರಿಯರ ಕವನಗಳಲ್ಲಿ. ಬರುವ ಕೌಶಿಕನ ಪ್ರಸಂಗದ ವಿವರಗಳನ್ನು ಗಮನಿಸಿದಾಗ ಅಕ್ಕನ ಪ್ರತಿಭಟನೆಯ ಸ್ವರೂಪ ನಿಚ್ಚಳವಾಗುತ್ತದೆ.

ಹರಿಹರ ತನ್ನ ಮಹದೇವಿಯಕ್ಕನ ರಗಳೆಯಲ್ಲಿ ಅಕ್ಕಮಹಾದೇವಿಯ ಅನುಪಮೆ, ರೂಪಲಾವಣ್ಯಗಳನ್ನು ಆಕಸ್ಮಿಕವಾಗಿ ಕಂಡು ಮೋಹಿತನಾಗಿ, ವಿರಹ ವಿಹ್ವಲವಾಗಿ ಅವಳಿಗಾಗಿ ಬೇಡಿ ತನ್ನವರನ್ನು ಕಳಿಸಿದಾಗ, ಅಕ್ಕಮಹಾದೇವಿಯ ತಂದೆ – ತಾಯಿಗಳು ರಾಜನಿಗೆ, ಅವನ ಅಧಿಕಾರಕ್ಕೆ ಹೆದರಿ ನಡುಗುತ್ತಾ, "ನೆರೆದು ಅರಸ ಕೌಶಿಕನೊಡನೆ ಸವಿಸುಖದೊಳಿರು ಮಗಳೆ" ಎಂದು ಆದೇಶಿಸುತ್ತಾರೆ. ಆದರೆ ಅದಕ್ಕೆ ಅಕ್ಕಮಹಾದೇವಿ ಮುನಿದು.

"ಎಲೆ ಭವಿಯೊಡನೆ ಬೆರಸಿರಲ್ಕಾರ್ಪನೆ
ಮೃಡ ಪೂಜೆಯಚಲ ಸುಖ ಮಂಪಿಂಗಲಾರ್ಪನೆ
ಅನೇಕ ಭವಿಯೇಕೆ ಭಕ್ತರೀ ಮಾತೇಕೆ
ಏನಾದೊಡಂ ಭವಿಯನೊಲ್ಲೆನೀ ಭ್ರಾಂತೇಕೆ
ಬೆಳಗಿಂಗೆ ಕತ್ತಲೆಯ ಕೂಟವುಂಟೇ ಮರುಳೆ
ತಿಳಿವಿಗಜ್ಞಾನದೊಳು ಸಂಗವುಂಟೇ ಮರುಳೆ"

ಎಂದು ಕೌಶಿಕ ಭವಿಯಾದ ಕಾರಣ ಅಸಮ ದಾಂಪತ್ಯ, ವಿಷಮ ದಾಂಪತ್ಯಕ್ಕೆ ಕಾರಣವಾಗುವುದೆಂಬ ಆಲೋಚನೆಯಿಂದ ವಿವಾಹವನ್ನು ನಿರಾಕರಿಸುತ್ತಾಳೆ.

ಸತಿಪತಿಗಳೊಂದಾಗಿ ಮಾಡುವ ಭಕ್ತಿ ಶಿವನಿಗೆ ಹಿತವಪ್ಪುದೆಂಬ ಅರಿವಿದ್ದ ತಂದೆ – ತಾಯಿಗಳು, ಕರಿಕಾಲಮ್ಮೆ, ಹೇರೂರ, ಹೆಂಗೂಸು, ವಜಕಟ್ಟೆ, ಮುಂಗಾಯಕ್ಕ ಮೊದಲಾದ ಶಿವಭಕ್ತರು 'ಭವಿಗಳೊಂದಿಗೆ ಬಾಳುತ್ತಲೇ ಭಕ್ತಿ ಸಾಧನೆ ಮಾಡಿದ ಉದಾಹರಣೆಗಳ ಮೂಲಕ ಮಗಳ ಮನವೊಲಿಸಲು ಪ್ರಯತ್ನಿಸುತ್ತಾರೆ. ರಾಜದಂಡದ ಭೀತಿ, ತಂದೆ – ತಾಯಿಗಳ ಒತ್ತಾಯ,

ಕಡೆಗೆ ರಾಜನಿಗೆ ಷರತ್ತುಗಳನ್ನು ಹಾಕಿ ಮದುವೆಯಾಗುತ್ತಾಳೆ. ಅವಳ ವ್ಯಕ್ತಿ ಸ್ವಾತಂತ್ರ್ಯವನ್ನು ಉಳಿಸಿಕೊಳ್ಳುವ ರೀತಿಯಲ್ಲಿ ವಿವಾಹ ಪ್ರಸ್ತಾಪವನ್ನು ತಂದವರ ಮುಂದೆ.

> "ನೀವೆಂದುದಂ ಮಾಳ್ವೆನಂತದಕ್ಕೆರಡಿಲ್ಲ
> ನೀವೆನ್ನ ಮನದೊಳಿದ್ದಂತೆ ಮಾಡುವುದೆಲ್ಲಿ
> ಎನ್ನಿಚ್ಚೆಯೊಳು ಶಿವನ ಪೂಜೆಯಲಿ ನಲಿದಿಪ್ಪೆ
> ಎನ್ನಿಚ್ಚೆಯೊಳು ಮಹೇಶ್ವರರ ಗೋಷ್ಠಿಯೊಳಿಪ್ಪೆ
> ಎನ್ನಿಚ್ಚೆಯೊಳು ಗುರುವಿನಂಘ್ರಿ ಸೇವೆಯೊಳಿಪ್ಪೆ
> ಎನ್ನಿಚ್ಚೆಯೊಳು ನಿಮ್ಮ ನೃಪನ ಸಂಗದೊಳಿಪ್ಪೆ
> ಇಲ್ಲಿಂ ಮೂರು ತಪ್ಪನೇ ಸೈರಿಸುವೆ ನರಿದು
> ಅಲ್ಲಿಂ ಬಳಿಕ್ಕೆವೊಲಿದಂತಿಪ್ಪೆ ನಾನುಳಿದು"

ಎಂದು ಷರತ್ತುಗಳನ್ನಿಡುತ್ತಾಳೆ. ಕೌಶಿಕನೂ ಷರತ್ತುಗಳನ್ನೊಪ್ಪಿ ಮದುವೆಯಾಗುತ್ತಾನೆ. ಕವಯತ್ರಿಯರು ಅಕ್ಕಮಹಾದೇವಿ ಸಿಟ್ಟು, ಸೆಡವು, ಕೋಪ, ತಾಪ, ಅಸಹನೆ, ಅಸಹಕಾರಿಗಳೊಂದಿಗೆ ದುಃಖ ದುಮ್ಮಾನಗಳೊಂದಿಗೆ ಕೌಶಿಕನಿಗೆ ಅಂಗಸುಖವನ್ನು ನೀಡಿದಂತೆ ಚಿತ್ರಿಸಿದ್ದಾರೆ. ಇಲ್ಲಿನ ಪ್ರಕಾರ ಅಕ್ಕಮಹಾದೇವಿ ಒಂದಷ್ಟು ದಿನಗಳಾದರೂ ಕೌಶಿಕನೊಂದಿಗೆ ದಾಂಪತ್ಯ ಜೀವನ ನಡೆಸಿದ್ದಾಳೆ. ಆದರೆ ಒಂದು ದಿನ, ಒಂದಷ್ಟು ಮಂದಿ ಮಾಹೇಶ್ವರರು ಅವಳನ್ನು ಕಾಣಲು ಬಂದಾಗ, ಸುಖಭಿದ್ರಾ ಭಂಗವಾಗಬಾರದೆಂದು ಕೌಶಿಕನು ಅವರನ್ನು ಹಿಂದಕ್ಕೆ ಕಳಿಸಿದ್ದೇ ಮಹಾಪರಾಧವಾಗಿ ಒಂದು ತಪ್ಪಿನ ಲೆಕ್ಕವಾಗುತ್ತದೆ.

ಮತ್ತೊಮ್ಮೆ ಬಂದ ಮಾಹೇಶ್ವರರಿಗೆ ಆರಾಧನೆಗೆ ಹತ್ತು ಸಾವಿರ ಹೊನ್ನು ಭಂಡಾರಿಯಾದ ನಿರಾಕರಿಸಲಾಗಿದ್ದು, ಕೌಶಿಕ ಬಂದ ಮೇಲೆ ಹೊನ್ನನ್ನು ಕೊಟ್ಟು ಸಮಾಧಾನಗೊಳಿಸಿದ್ದರಿಂದ ತಪ್ಪಿನಿಂದ ಪಾರಾಗುತ್ತಾನೆ.

ಶಿವಪೂಜಾ ನಿರತಳಾಗಿದ್ದಾಗೊಮ್ಮೆ ಕದ್ದು ಅವಳ ಸೌಂದರ್ಯವನ್ನು ಆಸ್ವಾದಿಸಿ ಎರಡನೇ ತಪ್ಪು ಮಾಡುತ್ತಾನೆ.

ಕೌಶಿಕನು ಮಾಡುವ ಮೂರನೆಯ ತಪ್ಪೆಂದರೆ ಕವಯತ್ರಿಯರು ವಿವರಿಸುವಂತೆ ಕೌಶಿಕ ರಾಜನುಂ ತಾನುಂ ಕಾಮಾನುರಾಗ ರಸದೊಳಾಳ್ದು ಸುರತಾಂತ್ಯ ಸಮಯ ಶ್ರಾಂತಿಭರಜನಿತ ಸುಖಸ್ವೇದಮಯ ಶರೀರೆಯಾಗಿರಲಲ್ಲಿಗೆ"

ಮಹಾದೇವಿಯಾರಾಧ್ಯದೇವರ್ ಶಿಷ್ಯಗಣದೊಂದಿಗೆ ಬರುವುದನ್ನು ಕಂಡು ತಟ್ಟನೆ ತನ್ನ ಅಸ್ತವ್ಯಸ್ತಗೊಂಡ ವಸ್ತ್ರಗಳ ಕಡೆ ಲಕ್ಷ್ಯವಿಲ್ಲದೆ ಇದ್ದಕ್ಕಿದ್ದಂತೆ ಎದ್ದು ಬಂದು ಎದುರುಗೊಂಡಾಗ, ಬಂದವರಿಗೇ ಸಂಕೋಚವಾಗಿ "ಮಗಳೇ ದುಕೂಲಮಂ ಬಾಸಣಿಸಿಕೊಳ್" ಎನ್ನಲು

ನಾಚಿಕೆಯಿಂದ ಮಂಚದ ಮೇಲಿದ್ದ ಸಪುರ ವಸ್ತ್ರವನ್ನು ತೆಗೆದುಕೊಳ್ಳಲು ಮುಂದಾದಾಗ, ಕೌಶಿಕ ತೆಗೆ ತೆಗೆ ನಿನಗೇ ಸತ್ಯಂತ ಭಕ್ತಿಗೆ ಮೀರಿದ ವಿರಕ್ತಿಗೆ ಸೀರೆ ಏಕೆ ?" ಎಂದು ಅವಳ ಕೈಯಿಂದ ಬಟ್ಟೆ ಕಿತ್ತುಕೊಂಡದ್ದೇ ಮೂರನೆ ತಪ್ಪು ಎಂದು ಕವಯತ್ರಿಯರು ಚಿತ್ರಿಸುತ್ತಾರೆ.

ಭವಿ ಸಂಗದಿಂದ ಬಿಡುಗಡೆಯಾದ ಸಂಭ್ರಮದೊಂದಿಗೆ ಕೇಶಾಂಬರಿಯಾಗಿ ಹೊರ ಬಂದಳು. ಎಂಬುದು ಅವಳು ಈಗ ಪ್ರಚಲಿತವಿರುವ ಭಿನ್ನಾಭಿಪ್ರಾಯಗಳಲ್ಲಿ ಕೇಶಾಂಬರಿಯಾಗಿದ್ದಳೆಂಬುದನ್ನೇ ಕವಯತ್ರಿಯರು ಒಪ್ಪಿಕೊಂಡಿರುವುದು ಸ್ಪಷ್ಟವಾಗಿ ತಿಳಿಯುತ್ತದೆ.

ಇವರ ಪ್ರಕಾರ ನಿರ್ವಾಣಕ್ಕೆ ಬಲವಾದ ಕಾರಣ, ಅವಳ ಸ್ವೇಚ್ಛಾ ವ್ಯವಹಾರಕ್ಕೆ ಕೌಶಿಕ ಅಡ್ಡಿಯಾದದ್ದು ; ಮತ್ತೊಂದು ಅಂಶವೆಂದರೆ, ಕೌಶಿಕನೊಂದಿಗೆ ಸ್ವಲ್ಪ ಕಾಲ ಸಂಸಾರ, ದಾಂಪತ್ಯವನ್ನು ನಡೆಸಿದ್ದಾಳೆ ಎನ್ನುವುದು ; ನಮ್ಮ ಆಧುನಿಕ ಕವಯತ್ರಿಯರು ಚಿತ್ರಿಸುವಂತೆ ಅದು ಇಲ್ಲಿಗೆ ನಿಲ್ಲದೆ ಮನೆಬಿಟ್ಟು ಹೋದ ಮೇಲೂ ಕೌಶಿಕನ ಅತಿಕಾಮುಕತೆ ಅವಳ ಬೆನ್ನು ಬಿಡುವುದಿಲ್ಲ.

ಭವಿಯಾಗಿ ತನ್ನನೊಲ್ಲದವಳು. ಭಕ್ತನಾಗಿ ಹೋದರೆ ಹೇಗೆಂದು ಯೋಚಿಸಿ ಭಕ್ತನ ಸೋಗಿನಲ್ಲಿ ಹೋಗಿ ವಂಚಿಸುವ ಪ್ರಯತ್ನ ಮಾಡುತ್ತಾನೆ. ಆದರೆ ವಂಚನೆಯ ವಾಸನೆ ಹತ್ತಿದ ಅಕ್ಕಮಹಾದೇವಿ, ಕೌಶಿಕನ ಸ್ಥಿತಿಗೆ ಮರುಗುವುದರ ಜೊತೆಗೆ ಮನುಷ್ಯರನ್ನು ಬೆಂಬಿಡದಿ ಮಾಯೆಯ ಬಗ್ಗೆ ಯೋಚಿಸುವಂತಾಗುತ್ತದೆ.

> "ಬಿಟ್ಟಪ್ಪೆನೆಂದಡಂ ಬಿಡದು ನಿನ್ನಯ ಮಾಯೆ
> ಒಟ್ಟಯಿಸಿ ಬಂದಡೊಡವಂದಪ್ಪುದೀ ಮಾಯೆ
> ಜೋಗಿಗಂ ಜೋಗಿಣಿಯಾಯ್ತು ನಿನ್ನಯೆ ಮಾಯೆ
> ರಾಗದಿಂ ಸವಣಂಗೆ ಕಂತಿಯಾಯಿತು ಮಾಯೆ....."

ಎಂದು ಮಾಯೆ ಎಂಬುದು ಮನುಷ್ಯರನ್ನು ಬೆನ್ನಟ್ಟಿಕೊಂಡು ಬರುವ ಸತ್ಯವನ್ನು ಹೇಳುವ ಈ ಮೇಲಿನ ಸಾಲುಗಳು ಅವಳ ಗಂಡಿಗೆ ಹೆಣ್ಣಾಗಿ ಕಾಡಿತ್ತು. ಮಾಯೆ ಹೆಣ್ಣಿಗೆ ಗಂಡಾಗಿ ಕಾಡಿತ್ತು ಮಾಯೆ" – ಎನ್ನುವ ವಚನದ ಸಾಲುಗಳನ್ನು ನೆನಪಿಸುತ್ತವೆ.

ನಮ್ಮ ಕವಯಿತ್ರಿಯರು ಅಕ್ಕನ ಬದುಕಿನ ಚಿತ್ರವನ್ನು ಕಟ್ಟಿಕೊಡುವಲ್ಲಿ ಅವಳ ವಚನಗಳಿಂದ ಸಾಕಷ್ಟು ಸ್ಫೂರ್ತಿ ಪಡೆದಿದ್ದಾರೆ ಎಂಬುದು ಸ್ಪಷ್ಟವಾಗುತ್ತದೆ.

ಚಾಮರಸನೂ ಪ್ರಭುಲಿಂಗಲೀಲೆಯಲ್ಲಿ ಅಕ್ಕನ ಬದುಕಿನ ಚಿತ್ರವನ್ನು ಅತ್ಯಂತ ಸಂಕ್ಷೇಪವಾಗಿ ಕೇವಲ ಕೆಲವೇ ಪದ್ಯಗಳಲ್ಲಿ ಮುಗಿಸಿಬಿಡುತ್ತಾನಾದರೂ ಕೌಶಿಕನ ಪ್ರಸಂಗವನ್ನು ನಮ್ಮ ಕವಯಿತ್ರಿಯರು ಸ್ವಲ್ಪಮಟ್ಟಿಗೆ ಬೇರೆಯಾಗಿ ಚಿತ್ರಿಸಿದ್ದಾರೆ.

ಕೌಶಿಕನನ್ನು ಬಿಟ್ಟು ಹೋಗುವುದಕ್ಕೆ ಮೊದಲಿನ ಅವಳ ಮನಸ್ಸಿನ ತೊಳಲಾಟ, ಅಸಹಾಯಕತೆ, ಒಲ್ಲದ ದಾಂಪತ್ಯ, ಬಲವಂತದ ದೇಹ ಸುಖ ಇತ್ಯಾದಿಗಳ ವಿವರವಿಲ್ಲ.

ನಮ್ಮ ಆಧುನಿಕ ಕವಯತ್ರಿಯರು ಹೇಳುವಂತೆ ಕೌಶಿಕ ಕಾಮಾಂಧ ಇಂದ್ರಿಯ ಲೋಲುಪ, ಲೈಂಗಿಕ ವ್ಯಸನಿ. ಆದರೆ ಕೆಲವೊಂದು ಕವನಗಳಲ್ಲಿ ಕೌಶಿಕ ಹೆಚ್ಚಿನ ಬಲವಂತಗಳನ್ನು ಮಾಡುವುದಿಲ್ಲ. ಮೊದಲಿಗೆ ಅಕ್ಕಮಹಾದೇವಿಯ ತಂದೆ ತಾಯ್ಗಳು. "ವಿಷಮಕುಲ, ನೃಪಕುಲ"ದ ಜೊತೆಗೆ ಸಂಬಂಧ ಮಾಡುವುದು ನಾಯಕ ನರಕಕ್ಕೆ ಸಮನೆಂದು ನಿರಾಕರಿಸಿದರೂ, ಕಡೆಗೆ ಮಗಳಿಗೇ ಒಪ್ಪುವ, ಬಿಡುವ ಜವಾಬ್ದಾರಿ ಕೊಟ್ಟಾಗ ಮೂರು ತಪ್ಪುಗಳ ಷರತ್ತಿಗೆ ಬದಲಾಗಿ ಇಲ್ಲಿ ಅವಳು –

"ನಾನೇ ಬೇಕಾಗಿರ್ದೊಡವನಾ
ನೇನ ಹೇಳಿದ ಮಾಡಲೆನುತಾ
ಮಾನಿನಿಯರೊಳು ನುಡಿದು ಮಧುರಾಳಾಪ ವಚನದಲಿ
ಆ ನರೇಂದ್ರನಿಗೆ ಬಂದು ನನ್ನಯ
ನೋನುರಾಗವ ಸಲಿಸುವಂತಿರೆ
ತಾನು ಶಪಥವ ಮಾಡಬೇಕೆಂದಳು ಅಕ್ಕ
ಅದರಂತೆಯೇ ಕೌಶಿಕ ರಾಜನು ಬಂದು
ಲಲನೆ ಕೇಳ್ ನಿನ್ನ ಬಯಕೆಯ
ಸಲಿಸುವೆನು ಮೊದಲಲ್ಲಿ ಬಳಿಕಾ
ನೊಲಿಸಿಕೊಂಬೆನು ನಿನ್ನಿನಂತಲ್ಲದೆ ಮರುಕ್ತಿಯಲ್ಲಿ
ನೆಲನೊಡೆಯ ನಾನೆಂಬ ಗರ್ವದ
ಬಲುಹು ಗಿಲುಹನು ಮಾಡಿದೊಡೆ
ಕೇಳೆಲಗೆ ತನ್ನ ಸತ್ಯಭಾಷೆಯ........"

ಈ ರೀತಿ ಹೇಳುವಾಗ ಅವನ ಸಜ್ಜನಿಕೆ, ಗೌರವಾನ್ವಿತ ವ್ಯಕ್ತಿತ್ವ ಕಾಣಬಹುದು.

ಮದುವೆಯಾದ ಮೇಲೆ ಅವಳ ಸ್ಪರ್ಶಕ್ಕೆ, ಕೂಟಕ್ಕೆ ಮುಂದಾಗಲೂ ಅಕ್ಕಮಹಾದೇವಿ ನಿರಾಕರಿಸಿ "ನೀನು ಸಲೆ ಶಿವಭಕ್ತನಾದಡೆ ಕೂಡುವೆನು ನಿನ್ನ, ನೀನು ಭವಿಯಾಗಿರ್ದೊಡೊಲ್ಲೆನು" ಎಂದು ನಿಷ್ಠುರವಾಗಿ ನುಡಿದಾಗ, "ನಮಗೆ ಶಿವಭಕ್ತಿಯನು ಮಾಡುವ ಸಮಯವಳವಡದು" ಎಂದು ಸೌಜನ್ಯದಿಂದಲೇ ಹೇಳುವನಾದರೂ ಅಕ್ಕಮಹಾದೇವಿ "ನಮಗೆ ನಿಮ್ಮಯ ಸಂಗವಳವಡಯ ನಮಗೆ ನಾವಿನ್ನುತ್ತರಾಯಿಗಳೆಮಗೆ ಬಂಧನ ಬಿಟ್ಟುದೆನ್ನುತಾ ಕ್ರಮದುಲುಟ್ಟುಡುಗೊರೆಯ ತೊಡಿಗೆಯನಿತ್ತಳ ರಸಂಗೆ". ಅಷ್ಟಕ್ಕೇ ನಿಲ್ಲದೆ ಉಟ್ಟು ತೊಟ್ಟುದ್ದನ್ನೆಲ್ಲ

ಬಿಚ್ಚಿ ಬಿಸಾಡಿ ತಲೆಗೆದರಿಕೊಂಡು ಪೂರ್ಣ ಬೆತ್ತಲೆಯಲ್ಲಿ ನಿಂತದ್ದು ಕೌಶಿಕನಿಗೆ ಬೆಚ್ಚಿ ಬೀಳುವಂತಾಗುತ್ತದೆ. ಅವಳ ಈ ನಿಲುವು ಏನೆಂದು ಅರ್ಥವಾಗುವುದಿಲ್ಲ.

ಅರಸ, 'ಕೌತುಕವ ಮಾಡಿದಳು ಶಿವಾ' ಎನುತ ಬೆರಗಾದುದರಲ್ಲಿ ಆಶ್ಚರ್ಯವಿಲ್ಲ.

ಅವಳಿಗೆ ತನ್ನ ರೀತಿಗೆ, ತನ್ನ ವಿರಕ್ತಿ, ಸಂಸಾರ ನಿರಾಕರಣೆಯ, ಅನುಭಾವದ ಅಗತ್ಯತೆಯ ಸಮರ್ಥನೆ ಇರಬಹುದಾದರೂ ಸಾಮಾನ್ಯರಿಗೆ, ಈ ಪ್ರಪಂಚದ ಲೌಕಿಕ ನೋಟಕರಿಗೆ "ಮಂತಿಭ್ರಮಣೆ"ಯಂತೆ ತೋರುವುದು ಸಹಜ, ಸ್ವಾಭಾವಿಕ. ಕೌಶಿಕನೂ ಅವಳನ್ನು ಈ ಸ್ಥಿತಿಯಲ್ಲಿ ನೋಡಿ ಉದ್ಗರಿಸಿದ್ದರ ಹಿಂದೆ ದಿಗ್ಭ್ರಮೆಯ ಜೊತೆಗೆ ಸಹಾನುಭೂತಿ, ಅನುಕಂಪ, ವಿಷಾದಗಳು ಬೆರೆತಿರುವುದು ಸೂಕ್ಷ್ಮಕ್ಕೆ ಹೊಳೆಯದೆ ಇರಲಾರದು.

ಇಂತಹ ಸ್ಥಿತಿಯಲ್ಲಿಯೂ ತಾನು ಮಾತು ಕೊಟ್ಟಂತೆ ಅಧಿಕಾರದ ಗರ್ವದಲ್ಲಿ ಅವಳನ್ನು ಶಿಕ್ಷಿಸಲು, ತಡೆಯಲು ಹೋಗುವುದಿಲ್ಲ.

ಮನದ ಅಭಿಲಾಷೆ, ಕಾಮದಾತುರಗಳನ್ನು ಕಳೆದುಕೊಂಡು, ಮೂಡಿದ ವಿವೇಕ, ಕೊಟ್ಟ ಭಾಷೆಯ ನೆನಪು ಎಲ್ಲವೂ ತಾನು ಮಹೇಶನೆಂಬುದನ್ನು ಮರೆಸಿತು. ಅವಳನ್ನು ಸುಮ್ಮನೆ ಹೋಗಲು ಬಿಟ್ಟನು. ಇಲ್ಲಿನ ವಿವರಣೆಯಲ್ಲಿ ಕೊಸರಾಟವಿಲ್ಲ.

ಬೆತ್ತಲೆಯಾಗಿ, ಹೊರಬಂದು, ಬಂದವರ ಮುಂದೆ, ಕೌಶಿಕನ ಮುಂದೆ ಕಸಿವಿಸಿಯ ಸನ್ನಿವೇಶದ ಚಿತ್ರವೂ ಇಲ್ಲ. ಕೌಶಿಕ ಸಜ್ಜನನಂತೆ, ಅವಳ ಷರತ್ತಿನಂತಿರಲು ಸಾಧ್ಯವಿಲ್ಲದಕ್ಕಾಗಿ ಸುಲಭವಾಗಿ ಹೋಗಗೊಡುತ್ತಾನೆ.

ಆಧುನಿಕ ಕವಯತ್ರಿಯರು ನೀಡುವ ಕೌಶಿಕನ ಚಿತ್ರ, ಅಕ್ಕನ ವಚನಗಳಲ್ಲಿ ಕೌಶಿಕ ಪ್ರಸಂಗವನ್ನು ನೆನಪಿಸುವ ಮಾತುಗಳು ಈ ಚಿತ್ರಕ್ಕೆ ಪೂರಕವೆನಿಸುತ್ತವೆ.

ಅಕ್ಕಮಹಾದೇವಿ ಕೌಶಿಕನನ್ನು, ಅವನೊಂದಿಗಿನ 'ವಿವಾಹ ಬಂಧ'ವನ್ನು ನಿರಾಕರಿಸುವ ಮೂಲಕ ವಿವಾಹ ವ್ಯವಸ್ಥೆಯನ್ನು, ರಾಜವ್ಯವಸ್ಥೆಯನ್ನು ಆಕೆ ಗಂಭೀರವಾಗಿ ಪ್ರತಿಭಟಿಸಿರುವುದನ್ನು ನಾವು ನೋಡಬಹುದು. ಆದರೆ ವಿವಾಹಬಂಧ ತೊರೆಯಲು, ವಿವಾಹದ ಬಗ್ಗೆ ಅವಳಿಗೆ ತಿರಸ್ಕಾರವಿತ್ತೇ ? ಎಂಬುದು ಪ್ರಶ್ನೆ. ಐತಿಹಾಸಿಕವಾಗಿ ಅವಳ ಜೀವನ ವಿವರಗಳು ಲಭ್ಯವಿಲ್ಲದ ಕಾರಣ ಅವಳ ಕುರಿತಾದ ಕೃತಿಗಳು ಮತ್ತು ವಚನಗಳೇ ನಮಗೆ ಆಧಾರ. ಹೀಗಾಗಿ ಕೃತಿಗಳಲ್ಲಿ ವಿವರಣೆಗೊಂಡಂತೆ, ವಿವಾಹವನ್ನು ನಿರಾಕರಿಸಲು, ವಿವಾಹಬಂಧವನ್ನು ಮುರಿದುಕೊಂಡು ಹೋಗಲು ಪ್ರಬಲವಾದ ಕಾರಣ 'ಕೌಶಿಕ ಭಕ್ತನಾಗಿ ಇಲ್ಲದೆ ಹೋದದ್ದು'.

"ಶಿವಭಕ್ತನಾದೊಡೆ ಕೂಡುವೆನು
ಭವಿಯಾದಡೆ ಬೆರಸಿರಲಾರ್ಪೆನೆ
ಏನಾದೊಡಂ ಭವಿಯನೊಲ್ಲೆನ್"

ಎಂಬ ಮಾತುಗಳು, ಶಿವಭಕ್ತನಾಗಿದ್ದ ಪಕ್ಷದಲ್ಲಿ ಮಹಾದೇವಿಯ ವಿರೋಧವಿರುತ್ತಿರಲಿಲ್ಲವೆಂಬ ಊಹೆ ಅಸಾಧುವಾಗಲಾರದು.

ಸಂದರ್ಭ ಸನ್ನಿವೇಶಗಳು ಪ್ರತಿಕೂಲವಾಗಿರುವಾಗ ಮತ್ತು ಸಾಂಪ್ರದಾಯಿಕ ಸಮಾಜ ವ್ಯವಸ್ಥೆಯ ಕಟ್ಟುಪಾಡುಗಳು ನಿಷ್ಠುರುವಾಗಿದ್ದಾಗ, ಯಾವುದಕ್ಕೂ ಹಿಂಜರಿಯದೆ, ಎದೆಗೆಡದೆ ತನ್ನ ಆಧ್ಯಾತ್ಮಿಕ ಲಕ್ಷ್ಯವನ್ನು ಸಾಧಿಸಿಕೊಳ್ಳಲು ಅವಳು ತೆಗೆದುಕೊಂಡು ನಿಲುವು, ತೋರಿದ ದಿಟ್ಟತನಗಳು, ಬಹುಶಃ ಇಡೀ ಜಗತ್ತಿನಲ್ಲಿಯೇ ಅನನ್ಯವಾದುದು.

ಆಯಾ ಒಂದು ಹೆಣ್ಣು, ನಿರ್ವಾಣ ಸ್ಥಿತಿಯಲ್ಲಿ ಹೊರಟು ನಿಂತಿದ್ದು ಕಲ್ಪನೆಗೂ ನಿಲುಕದ್ದು. ಜೈನಮತದಲ್ಲಿ ದಿಗಂಬರ ಪಂಥಿಗಳಲ್ಲಿ ಪೂರ್ಣ ನಿರ್ವಾಣದಲ್ಲಿನ ಸನ್ಯಾಸಿಗಳಿರುವರಾದರೂ ಸಮಾಜದಿಂದ ದೂರ ಬೆಟ್ಟ, ಕಾಡು ಇತ್ಯಾದಿ ಒಳಪ್ರದೇಶಗಳಲ್ಲಿ ವಾಸಿಸುತ್ತಾರೆಯೇ ಹೊರತು ಊರುಗಳಲ್ಲಿ ಅಡ್ಡಾಡುವುದಿಲ್ಲ.

ಅಂತಹದ್ದರಲ್ಲಿ ದೇಹದ ಮೇಲಿನ ಮೋಹಬಿಟ್ಟು, ಲಜ್ಜೆ ಬಿಟ್ಟು, ತಾನೊಲಿದ ಅಲೌಖಿಕ ಪುರುಷ ಚೆನ್ನಮಲ್ಲಿಕಾರ್ಜುನನ ಅನ್ವೇಷಣೆಯಲ್ಲಿ ಹೊರಟಳು.

ಆಕೆ ಸಾಮಾನ್ಯವಾದ ಹೆಣ್ಣಲ್ಲ ; ಸಾಮಾನ್ಯ ಹೆಣ್ಣುಗಳ ಊಹೆಗೂ ನಿಲುಕದ ಎತ್ತರದ ವ್ಯಕ್ತಿತ್ವ, ಭಕ್ತಿ, ಜ್ಞಾನ, ವೈರಾಗ್ಯಗಳು ಹುಟ್ಟಿನಿಂದಲೇ ಮುಪ್ಪುರಿಗೊಂಡು ಅವಳಲ್ಲಿ ನೆಲೆಸಿದ್ದವು. ಅವಳ ಹೋರಾಟ ಸಾಧನೆಗಳೆಲ್ಲಕ್ಕೂ ವೈಯಕ್ತಿಕವಾಗಿ ಅವಳೇ ಹೊಣೆ ; ಅವಳೇ ಕಾರಣ.

ನೇರವಾಗಿ ನಮಗೆ ವಚನಗಳಲ್ಲಿ ಜೀವನ ವಿಚಾರಗಳು, ಸಿಗದಿದ್ದರೂ, ವಚನಗಳ ಧಾಟಿ, ಧ್ವನಿಯಿಂದ ಪರೋಕ್ಷವಾದ ಪ್ರಸ್ತಾಪಗಳಿಂದ ಅವಳ ಆತ್ಮಕಥಾನಕ ಸೂಕ್ಷ್ಮಗಳನ್ನು ಅರಿಯಲು ಸಾಧ್ಯವಿದೆ. ಕೌಶಿಕನೊಡನೆ ಮದುವೆ, ಆ ಸಂದರ್ಭದಲ್ಲಿಯೇ ಮುಖಾಮುಖಿಯಾದ ಸಂಘರ್ಷಗಳು, ಸಮಾಜದಿಂದ ಎದುರಿಸಿದ ಸಂಕಷ್ಟಗಳು, ಜನರ ಪ್ರತಿಕ್ರಿಯೆ, ಅವಮಾನ, ಅವಹೇಳನ, ಸಮಾಜ ತನ್ನನ್ನು ಕಂಡು ನಡೆಸಿಕೊಂಡ ರೀತಿ ಇವುಗಳ ನಡುವೆಯೂ ತಾನೊಲಿಯ, ತುಡಿದು ಅರಸಿಕೊಂಡು ಹೊರಟ ಅಲೌಖಿಕ ಗಂಡನ ಬಗ್ಗೆ ತನಗಿದ್ದ ಅನನ್ಯ ಪ್ರೀತಿ ತನ್ನ ಮನದ ಸಂಭೋಗ, ವಿಪ್ರಲಂಭಸ್ಥಿತಿ, ಅರ್ಪಣಾ ಮನೋಭಾವ, ಲೌಕಿಕದೊಂದಿಗಿನ ತನ್ನ ಸಂಬಂಧಗಳ ನಿರಾಕರಣೆಯ ರೀತಿ, ವಿಶೇಷವಾಗಿ 'ಕಾಯ' ಬಗೆಗಿನ ತನ್ನ ಧೋರಣೆಗಳು, ವಾಸ್ತವ ಪ್ರಪಂಚ, ಇದರೊಂದಿಗಿನ ನಂಟುಗಳಿಗೆ ಪರ್ಯಾಯವಾಗಿ ಕಟ್ಟಿಕೊಂಡ ಹೊಸ ಸಂಬಂಧಗಳು – ಮುಂತಾದವುಗಳ ಎಲ್ಲಾ ವಿವರಗಳೂ ಮತ್ತು ಆಕೆ ಮುಟ್ಟಿ ನಿಂತ ಅನುಭಾವದ ಔನ್ನತ್ಯ – ಎಲ್ಲವೂ ವಚನಗಳ ಮೂಲಕವೇ ಗ್ರಹಿಕೆಗೆ ಸಾಧ್ಯವಾಗುತ್ತದೆ.

ಅವಳ ಸಂಘರ್ಷ, ಮಾನಸಿಕ ತುಮುಲಗಳು ಆರಂಭವಾದದ್ದೇ ಕೌಶಿಕನ ಪ್ರಸಂಗದಿಂದ ಕೌಶಿಕ ಭಕ್ತನಲ್ಲದ ಕಾರಣ ಅವಳ ಆಧ್ಯಾತ್ಮಿಕ ಆಶಯಗಳಲ್ಲಿ ಪಾರಮಾರ್ಥಿಕ ಚಿಂತನೆಗಳನ್ನು, ಭಕ್ತಿ ಸಾಧನೆಯ ಅಗತ್ಯವನ್ನು ಅರ್ಥಮಾಡಿಕೊಳ್ಳಲಾರ. ವಿವಾಹ ಸಾಮಾನ್ಯ ಪುರುಷನೊಬ್ಬನೊಂದಿಗೆ ಪ್ರಸ್ತಾಪಿತವಾದರೆ ಅದರ ನಿರಾಕರಣೆ ಸ್ವಲ್ಪಮಟ್ಟಿಗೆ ಸುಲಭ

ಸಾಧ್ಯವಾಗುತ್ತಿತ್ತು. ಸಮಾಜವನ್ನು ವಿರೋಧಿಸಿ ನಿಲ್ಲುವುದು ಸ್ವಾಭಾವಿಕವಾಗಿ ಅವಳಿಗೆ ದಕ್ಕಿದ್ದ ಆತ್ಮಸ್ಥೈರ್ಯದಿಂದ ಅಷ್ಟೊಂದು ಕಷ್ಟವಾಗುತ್ತಿರಲಿಲ್ಲ. ಆದರೆ ಅವಳಿಗೆ ಕೌಶಿಕನ ವಿಚಾರದಲ್ಲಿ ಸಮಸ್ಯೆ ಎನಿಸಿದ್ದು, ಅವನು ರಾಜನಾದ್ದರಿಂದ ಅರಸೊತ್ತಿಗೆಯನ್ನು ವಿರೋಧಿಸುವುದು, ಅರಸನನ್ನು ಎದುರು ಹಾಕಿಕೊಳ್ಳುವುದು ಅಷ್ಟೊಂದು ಸುಲಭದ ವಿಷಯವಾಗಿರಲಿಲ್ಲ. ರಾಜದಂಡದ ಹೆದರಿಕೆ ಮದುವೆಗೆ ಒತ್ತಾಯಿಸುತ್ತದೆ. ಆದರೂ ಷರತ್ತುಗಳ ಮೂಲಕ ಅರಸನನ್ನು ಧಿಕ್ಕರಿಸಿ ಹೊರಡಲು ಸಾಧ್ಯವಾಯಿತಾದರೂ, ಅವನೊಂದಿಗೆ ಸಂಸಾರ ಮಾಡಿ ದಾಂಪತ್ಯ ನಡೆಸಿರಬಹುದೆನ್ನುವುದಕ್ಕೆ ಅವಳ ಕೆಲವು ವಚನಗಳು ಪುಷ್ಟಿ ನೀಡುತ್ತವೆ.

ಸಂಸಾರ ನಡೆಸಿದ, ನಡೆಸುವ ಸಂದರ್ಭದಲ್ಲಿನ ದ್ವಂದ್ವ ನೀತಿ ಅವಳನ್ನು ಗಂಭೀರವಾದ ಚಿಂತನೆಗೆ, ತೊಳಲಾಟಕ್ಕೆ ಮಾನಸಿಕ ಯಾತನೆಗೆ ಒಳಗು ಮಾಡಿದೆ.

ಲೌಖಿಕ, ಪಾರಮಾರ್ಥಿಕ, ಭೌತಿಕ – ಅಭೌತಿಕಗಳೆರಡನ್ನೂ ಒಟ್ಟೊಟ್ಟಿಗೆ ನಿಭಾಯಿಸಲು ಸಾಧ್ಯವಿಲ್ಲ ಎಂಬ ಅರಿವಿದ್ದರೂ ಅನಿವಾರ್ಯವಾಗಿ ನಿಭಾಯಿಸಬೇಕಾದ ಒತ್ತಡಗಳಲ್ಲಿ ಸಿಲುಕಿದಾಗಿನ ಸ್ಥಿತಿಯನ್ನೇ ವಚನಗಳು ವಿವರಿಸುತ್ತವೆ.

ಬದುಕಿನ ಪರಿಪೂರ್ಣತೆಗೆ ಹೆಣ್ಣು – ಗಂಡು, ಪ್ರಕೃತಿ ಪುರುಷ ಸಮಾಗಮ ಅನಿವಾರ್ಯ. ಅದು ಲೋಕ ಸತ್ಯವೂ ಹೌದು ; ಪಾರಮಾರ್ಥಿಕ ಸತ್ಯವೂ ಹೌದು. ಲೌಕಿಕದ ನೆಲೆಯಲ್ಲಿ ವಿವಾಹದ ಚೌಕಟ್ಟಿನಲ್ಲಿ ಗಂಡು – ಹೆಣ್ಣು ಒಂದಾಗುವ 'ದಾಂಪತ್ಯ', ಅನುಭಾವ, ಆಧ್ಯಾತ್ಮಿಕ ನೆಲೆಯಲ್ಲಿ ಐಕ್ಯ, ಸಮ್ಮಿಲನ. ಆರಾಧಿಸುವ ಪರಮಾತ್ಮನೊಂದಿಗೆ ಒಂದಾಗಿ ದ್ವೈತದಿಂದ ಅದ್ವೈತ ಸ್ಥಿತಿಯನ್ನು ತಲುಪುವುದಾಗುತ್ತದೆ.

ಅಕ್ಕಮಹಾದೇವಿ ಬಯಸಿದ್ದು, ಅರಸಿದ್ದು ಈ ಅಲೌಕಿಕ ದಾಂಪತ್ಯವನ್ನು, ಮಿಲನವನ್ನು ಅಲೌಕಿಕ ಗಂಡನಿಗಾಗಿ ತುಡಿವ, ಅವನ ಪ್ರೇಮದ ಅನುಭೂತಿಗಾಗಿ ಹಂಬಲಿಸುವ, ವಿರಹದಲ್ಲಿ ಬೇಯುವ ಎಲ್ಲಾ ಪರಿಸ್ಥಿತಿಗಳೂ ಲೌಕಿಕ ಪರಿಭಾಷೆ, ಚಿತ್ರಗಳಲ್ಲಿರುವಂತೆ ಕಂಡರೂ ಅದರ ಹಿಂದೆ ಅನುಭಾವದ ಆಶಯವಿದೆ. ನೋಟಕ್ಕೆ ಲೌಕಿಕದಂತೆ ಕಂಡರೂ ಲೌಕಿಕದ ನೆಲೆಮೀರಿದ ಆಶಯಗಳನ್ನು ಅನುಭಾವದ ಅರ್ಥಗಳನ್ನು ಬಿಂಬಿಸುತ್ತದೆ. ಕೌಶಿಕನ ಸಂಬಂಧದಿಂದ ಉಂಟಾದ ಯಾತನೆ, ಸಂಘರ್ಷ, ಹತಾಶೆ, ನಿರಾಶೆ, ದೇಹದ ಮೇಲಿನ ಜಿಗುಪ್ಸೆ, ನೋವು, ಒಂಟಿತನ ಮುಂತಾದವುಗಳು ಚೆನ್ನಮಲ್ಲಿಕಾರ್ಜುನನೆಡೆಗೆ ಮತ್ತಷ್ಟು ತೀವ್ರಗೊಳ್ಳುವುದಕ್ಕೆ ಸಹಕರಿಸಿವೆ.

ಅಕ್ಕ ಮೊದಲಿನಿಂದಲೂ ಚೆನ್ನಮಲ್ಲಿಕಾರ್ಜುನನಿಗೆಂದೇ ಮೀಸಲಿರಿಸಿದ ದೇಹ, ಅನ್ಯ ಪುರುಷರ ನೋಟಕ್ಕೆ, ಕೂಟಕ್ಕೆ ಉಪಯೋಗಕ್ಕೆ ಬರುವುದನ್ನು ಸಹಿಸಲಾಗದ ಮನಸ್ಸು ತಾನು ನಂಬಿದ ಚೆನ್ನಮಲ್ಲಿಕಾರ್ಜುನನಿಂದಲೇ ಸಮಾಧಾನ ಬಯಸುತ್ತದೆ.
ಆಕೆ ಹೇಳುವಂತೆ,

"ಎನ್ನ ತುಂಬಿದ ಜವ್ವನ ತುಳುಕುವ ಮೋಹನ !
ನಿನಗೆ ಇಂಬು ಮಾಡಿಕೊಂಡಿರ್ದೆನಲ್ಲಾ ಬಲೆಯಯ್ಯಾ !
ಎನ್ನ ಲಂಬಿಸುವ ಲಾವಣ್ಯದ ರೂಪುರೇಖೆಗಳ !
ನಿನ್ನ ಮುಂದಿಟ್ಟರಲನ್ಯರು ಕೊಂಡೊಯ್ಯುವಾಗಲೆಂತು
ಸೈರಿಸಿದೆ ಹೇಳಾ".

ಎಂದು ಕೇಳುವ ಮನಸ್ಸು, ಅನಿವಾರ್ಯವಾಗಿ ಲೌಕಿಕ ಗಂಡನ ಸಂಗಕ್ಕೆ ಬರಲೇ ಬೇಕಾದಾಗ, ಅವನು ಬಯಸುವ ದೇಹಸುಖವನ್ನು ನೀಡಲೇಬೇಕಾದಾಗ ನಿಸ್ಪಂದ ಸ್ಥಿತಿಯನ್ನು ಆವಾಹಿಸಿಕೊಳ್ಳಬೇಕಾಗುತ್ತದೆ.

ಆದರೂ ತನ್ನ ನಿರಾಸಕ್ತಿ, ಅಸಹಾಯಕತೆ, ಆಕ್ರೋಶ, ವಿರೋಧಗಳನ್ನು ಸಾಧ್ಯವಾದಷ್ಟು ತೋರಿಸಿಕೊಳ್ಳುತ್ತಾಳೆ. ಕೌಶಿಕನ ಜೊತೆಗಿನ ತನ್ನ ಸಂಬಂಧದ ನೆಲೆಗಳನ್ನು, ಅದರ ಬಗೆಗಿನ ತನ್ನ ನಿಲುವುಗಳನ್ನು ಕೆಳಗಿನ ಕೆಲವು ವಚನಗಳು ಸ್ಪಷ್ಟವಾಗಿ ಬಿಂಬಿಸುತ್ತವೆ.

ಅಂದರೆ ಕೌಶಿಕನು ಬಹಳ ಕಾಮುಕ ಪುರುಷ, ಅವನಿಗೆ ಸದಾ ಮಹಾದೇವಿಯ ಚಿಂತೆಯಲ್ಲಿ ಮೊಳಗಿರುವುದನ್ನು ನೋಡಬಹುದು.

"ಎಮ್ಮೆಗೊಂದು ಚಿಂತೆ ; ಸುಮ್ಮಗಾರಗೊಂದು ಚಿಂತೆ
ಧರ್ಮಿಗೊಂದು ಚಿಂತೆ ; ಕರ್ಮಿಗೊಂದು ಚಿಂತೆ
ಎನಗೆ ಎನ್ನ ಚಿಂತೆ ; ತನಗೆ ತನ್ನ ಕಾಮದ ಚಿಂತೆ
ಒಲ್ಲೆ ಹೋಗು, ಸೆರಗು ಬಿಡು ಮರುಳೆ
ಎನಗೆ ಚೆನ್ನಮಲ್ಲಿಕಾರ್ಜುನದೇವರು
ಒಲಿವರೋ ಒಲಿಯರೊ ಎಂಬ ಚಿಂತೆ."

ಅಕ್ಕ ಹೇಳುವಂತೆ, ಆಕೆ ಸೌಂದರ್ಯ ಸ್ವರೂಪಿಯಾಗಿರುದ್ದರಿಂದ ಆಕೆಯನ್ನು ಬಿಡದೆ, ಆಕೆಯ ಸುಂದರತೆ ಅವನ ಕಂಗಳಿಗೆ ಸಿಡಿಲ್ ಬಡಿದಂತೆ ರಪ್ಪನೆ ಅವನ ಹೃದಯ ಹೊಕ್ಕಿತು. ಅಲ್ಲಿಂದ ಆಕೆಯ ಬೆಂಬಿಡದೆ ಹಿಂದೆ ಸುತ್ತುತ್ತಿರುತ್ತಾನೆ. ಅಕ್ಕ ಏನೇ ಹೇಳಿದರೂ ಅವಳನ್ನ ಬಿಡುವುದಿಲ್ಲ. ಎನ್ನುವಂತೆ ಅವನ ಮಾತುಗಳನ್ನು ಗಮನಿಸಬಹುದು.

ಒಂದು ರೀತಿಯಾಗಿ 'ಬಿಟ್ಟೆನೆಂದರೆ ಬಿಡದೀ ಮಾಯೆ' ಎಂಬಂತೆ ಕೌಶಿಕನ ಕಾಟ ಹೆಚ್ಚಾಗುತ್ತಿದೆ.

ಅಕ್ಕ ಕೌಶಿಕನನ್ನು ನಿರಾಕರಿಸಲು ಕಾರಣವೆಂದರೆ ಅವನಲ್ಲಿರುವ ಗುಣಗಳನ್ನು ಲೆಕ್ಕಾಚಾರ ಹಾಕುತ್ತಾಳೆ.

"ಎಲೆ ಕಾಲಿಂಗೆ ಸೊರೆಯಾದ ಕರ್ಮಿ
ಎಲೆ ಕಾಮಂಗೆ ಗುರಿಯಾದ ಮರುಳೆ
ಬಿಡು ಬಿಡು ಕೈಯ
ನರಕವೆಂದರಿಯದೆ ತಡೆವರ ಮನುಜಾ
ಚೆನ್ನಮಲ್ಲಿಕಾರ್ಜುನನ ಪೂಜೆಯ ವೇಳೆ ತಪ್ಪಿದರೆ
ನಾಯಕ ನರಕ ಕಾಣಾ ನಿನಗೆ"

ಕೌಶಿಕನ ವ್ಯಕ್ತಿತ್ವ ಚಿತ್ರಣವನ್ನು ಕಟ್ಟಿಕೊಡುವುದರ ಜೊತೆಗೆ ತಾನು ನಿರೀಕ್ಷಿಸುವ ಯಾವ ಗುಣಗಳೂ ಅವನಲ್ಲಿ ಇಲ್ಲದಿರುವುದನ್ನು ಹೇಳುತ್ತಾ, ತನ್ನ ಕಲ್ಪನೆಯ ಗಂಡನ ಸ್ವರೂಪ ಹೇಗಿರಬೇಕೆಂಬ ಸುಪ್ತ ಬಯಕೆಯ ಸೂಕ್ಷ್ಮವನ್ನು ಬಿಂಬಿಸುತ್ತದೆ.

ಕೌಶಿಕ ಮಹಾರಾಜನು ಕಾಮುಕ, ಹುಟ್ಟು – ಸಾವುಗಳಿಗೆ ಗುರಿಯಾದವನು, ವಿಷಯ ಸುಖ – ಸ್ವಾದಗಳಿಗೆ ಒಳಪಟ್ಟವನು. ಅದೆಲ್ಲಕ್ಕಿಂತ ಹೆಚ್ಚಾಗಿ ಅವನೊಬ್ಬ ಹುಲು ಮನುಜ ; ಭವಿ ; ತನಗೂ ಅವನಿಗೂ ಸಾಮರಸ್ಯ ಅನ್ಯೋನ್ಯತೆಗಳು ಸಾಧ್ಯವೇ ಇಲ್ಲ. ಅವಿನಾಶಿ ಪುರುಷನನ್ನು, ಕಾಮನನ್ನೇ ಗೆದ್ದವನನ್ನು ಹುಟ್ಟಿನಿಂದಲೇ ಒಲಿದವಳು. ಅನಾದಿಕಾಲದ ಸಂಬಂಧ.

"ಉರಕ್ಕೆ ಜವ್ವನಗಳು ಬಾರದ ಮುನ್ನ
ಮನಕ್ಕೆ ನಾಚಿಕೆಗಳು ತೋರದ ಮುನ್ನ
ನಮ್ಮವರಂದೆ ಮದುವೆ ಮಾಡಿದರು
ಸಿರಿ ಶೈಲ ಚೆನ್ನಮಲ್ಲಿಕಾರ್ಜುನಂಗೆ
ಹೆಂಗೂಸೆಂಬ ಭಾವ ತೋರದ ಮುನ್ನ
ನಮ್ಮವರಂದೆ ಮದುವೆ ಮಾಡಿದರು."

ಹೀಗಿರುವಾಗ ಕೌಶಿಕ ತನಗೆ ಲೋಕದ ದೃಷ್ಟಿಯಲ್ಲಿ ಗಂಡನೆನಿಸಬಹುದಾದರೂ, ಪರಪುರುಷ ಮಾನಸಿಕವಾಗಿ ಎಂದಿಗೂ ಈ ಲೌಕಿಕ ಸಂಬಂಧವನ್ನು ಒಪ್ಪಿಕೊಳ್ಳು ಸಾಧ್ಯವಾಗುವುದಿಲ್ಲ.

"ಮಹಾಪುರುಷರೆನಗೆ ಎರದ ಮುಳ್ಳಿನಂತೆ" ಎಂದು ಘೋಷಿಸಿಯೇ ಬಿಟ್ಟಿದ್ದಾಳೆ. ಅವನಿಂದ ಬಿಡಿಸಿಕೊಂಡು ಅವನು ಹಲುಬಿ, ಹಂಬಲಿಸಿ, ಅದರ ಸುಖಕ್ಕಾಗಿ ಹಿಂಸಿಸುವ ಈ ದೇಹದ ನಶ್ವರತೆ, ಅದರ ವಿಕಾರತೆಗಳನ್ನು ಅರಿತು, ಅದನ್ನು ಚೆನ್ನಮಲ್ಲಿಕಾರ್ಜುನನಿಗೆ ಒಪ್ಪಿತವಾಗುವಂತೆ ಅಣಿಗೊಳಿಸಬೇಕು.

ದೇಹ ಕಾಯಗಳು ಇಂದ್ರಿಯಗಳನ್ನಿರಿಸಿಕೊಂಡು ಅವುಗಳೊಂದಿಗಿನ ಸಂಗ ಸೂತಕ ಕಳೆದಲ್ಲದೆ ಆ ಪುರುಷನಿಗೆ, ನಲ್ಲನಿಗೆ ಯೋಗ್ಯವಾಗದು. ಅವಳ ಪ್ರಯತ್ನವೆಲ್ಲವೂ ತನ್ನ ದೇಹ,

ಮನಸ್ಸುಗಳನ್ನು ಲೌಕಿಕದಿಂದ ಬಿಡಿಸಿಕೊಳ್ಳುವುದರ ಕಡೆಗೆ ಹುಟ್ಟಿನಿಂದಲೇ ಭಕ್ತಿ, ಜ್ಞಾನ, ವೈರಾಗ್ಯಗಳನ್ನು ರೂಢಿಸಿಕೊಂಡವಳಿಗೆ ಪ್ರಪಂಚದ ಕಲ್ಪನೆ ಇದೆ. ಈ ಪ್ರಾಪಂಚಿಕ ಸಂಬಂಧಗಳಲ್ಲಿನ ಹಿಂಸೆ, ಕ್ರೌರ್ಯಗಳ ಅರಿವಿದೆ. ಹೆಣ್ಣು ಗಂಡು ಸಂಬಂಧಗಳನ್ನು ನೋಡುವ ಸಮಾಜದ ದೃಷ್ಟಿಯೇ ಬೇರೆ. ಹೆಣ್ಣೆಮದರೆ ಹೆಣ್ಣಿನ ಮನಸ್ಸು, ವ್ಯಕ್ತಿತ್ವಗಳಿಗಿಂತ ದೇಹದ ಆಕರ್ಷಣೆಯೇ ಪ್ರಮುಖವಾಗುತ್ತದೆ. ವ್ಯಕ್ತಿ ಸ್ವಾತಂತ್ರ್ಯವನ್ನು ಕಸಿದುಕೊಂಡ ಸಾಮಾಜಿಕ ಕಟ್ಟುಪಾಡುಗಳು ಹೆಣ್ಣಿಗೆ ಮಾತ್ರ ಸೀಮಿತ.

ಕಾಮ, ವಿಕಾರಗಳನ್ನೊಳಗೊಂಡು ಕ್ಷುಲ್ಲಕ ದೃಷ್ಟಿಯಿಂದ ನೋಡುವ ಪುರುಷ ಸಮಾಜದ ಹಿಂಸೆ ಇಂತಹ ಕಾರಣಗಳಿಗಾಗಿಯೇ ಈ ಪ್ರಪಂಚ, ಈ ಸಮಾಜ, ಈ ದೇಹ, ಪುರುಷ ಸಮುದಾಯ ಎಲ್ಲವೂ ನಿರಾಕರಣ ಯೋಗ್ಯವೆನಿಸುತ್ತದೆ.

ಅಕ್ಕಮಹಾದೇವಿ ತಾನು ಒಲಿದ ಗಂಡ ಲೌಕಿಕರಿಗಿಂತ ಭಿನ್ನವಾಗಿದ್ದಾನೆ ಎಂದು ತಿಳಿಸುವುದರ ಜೊತೆ 'ಮಿಗೆ ಮಿಗೆ ಒಲಿದೆ' ಎನ್ನುವಲ್ಲಿ ಅವಳ ಉತ್ಕಟ ಪ್ರೀತಿಯಿರುವುದನ್ನು ಸ್ಪಷ್ಟಪಡಿಸುತ್ತಾಳೆ. ಲೌಕಿಕದ ನೆಲೆಯಲ್ಲಿ ತನ್ನ ಪ್ರೇಮ ಸಂಬಂಧವಾದ ಕಲ್ಪನೆಗಳು ಕನಸುಗಳು ಸಾಧ್ಯವಾಗದೆ ಹೋದದ್ದು ಚೆನ್ನಮಲ್ಲಿಕಾರ್ಜುನನ ಸಂಬಂಧದಿಂದ ಸಾಕ್ಷಾತ್ಕರಿಸಿಕೊಳ್ಳುತ್ತಾಳೆ. ಈ ಲೌಕಿಕನಲ್ಲಿನ ಒಡನಾಟಕ್ಕೆ ಮುಕ್ತ ಪ್ರೇಮದ ಅಭಿವ್ಯಕ್ತಿಗೆ, ಹಾದರಕ್ಕೆ ಯಾವುದೇ ನಿರ್ಬಂಧಗಳಿಲ್ಲ. ಇಲ್ಲಿ ಎಲ್ಲವೂ ಒಪ್ಪಿತ ಸ್ವತಂತ್ರ ಮನಸ್ಸಿನ ಹೆಣ್ಣಿನ ಆಸೆ, ಆಕಾಂಕ್ಷೆ ಹಂಬಲ, ನಿರೀಕ್ಷೆಗಳು ಈ ನೆಲೆಯಲ್ಲಿ ಸಾಧ್ಯವಾಗಿದೆಯೆ ಹೊರತು ಲೌಕಿಕ ಸಮಾಜದಲ್ಲಿ ಇಂತಹ ನಡವಳಿಕೆ ಖಂಡನೀಯವೆನಿಸುತ್ತದೆ.

ಚಿಕ್ಕವಳಿದ್ದ ಅಕ್ಕಮಹಾದೇವಿ ಚೊಕ್ಕಟವಾಗಿ ಬೆಳೆದು, ತೇಜೋಮಯವಾಗಿ ನವ ಯೌವ್ವನ ರೂಪ ಒರಸೂಸುವ ಚೆಲುವೆಯಾಗಿ ಮಂದಹಾಸವನ್ನೇ ಬೀರುತ್ತಿದ್ದಳು. ಒಂದು ದಿನ ಅಕ್ಕನು ಗೆಳತಿಯರೊಡನೆ ನಗೆಯಾಡುತ್ತಿದ್ದಾಗ ಕೌಶಿಕ ಅರಸನು ತನ್ನ ಪರಿವಾರದೊಡನೆ ಹಾಯ್ದು ಹೋದನು. ಅವನು ಅವಳ ರೂಪ ಲಾವಣ್ಯಗಳನ್ನು ಕಂಡು ಮುಗ್ಧ ಮೋಹಿತನಾದನು. ಅಕ್ಕನ ಮೇಲೆ ಅವನ ಕಾಮ, ಮನಸ್ಸು ನೆಟ್ಟಿತು. ಮನಸೋತ ಅರಸ ಅವಳ ತಂದೆ – ತಾಯಿಗಳ ಬಳಿಗೆ ವಿಷಯ ತಿಳಿಸಲು ಹೆಗ್ಗಡತಿಯನ್ನು ಕಳುಹಿಸುವನು.

ಹೆಗ್ಗಡತಿಯರು ಬಂದು ಅವಳ ತಂದೆ – ತಾಯಿಗಳನ್ನು ಒಡಂಬಡಿಸಲೆತ್ನಿಸುವರು ಅವರು ಅಕ್ಕನನ್ನೇ ಕೇಳಿರಿ ಎಂದು ಹೇಳುವರು. ಹೆಗ್ಗಡತಿ ಅಕ್ಕನನ್ನು ಕೇಳಲು, ಸಾವಿಲ್ಲದ, ಕೇಡಿಲ್ಲದ, ರೂಹಿಲ್ಲದ, ಚೆಲುವಾದ, ಭವವಿಲ್ಲದ, ಭಯವಿಲ್ಲದ, ನಿರ್ಭಯ ಚೆಲುವಾಂಗನೊಲಿದ ಎಡೆಯಿಲ್ಲದ, ಕಡೆಯಿಲ್ಲದ, ತೆರಹಿಲ್ಲದ, ಕುರುಹಿಲ್ಲದ, ಚೆಲುವ ಹಾಗೂ ಕುಲಸೀಮೆಯಿಲ್ಲದ ನಿಸ್ಸೀಮ ಚೆಲುವನನ್ನು ವರಿಸಿರುವೆನು ಕಾರಣ 'ಚೆನ್ನಮಲ್ಲಿಕಾರ್ಜುನನೇ ಎನಗೆ ಗಂಡನು ಮಿಕ್ಕವರು ಎನಗೆ ಸ್ವಾಮಿಗಳಲ್ಲ ; ಅವರನ್ನೊಯ್ದು ಒಲೆಯೊಳಗಿಕ್ಕಿರಿ' ಎಂದು ಹೇಳಿ, ಪರಮ ಶಿವತತ್ವವನ್ನೇ ಹೆಗ್ಗಡತಿಯರಿಗೆ ಹೇಳುವಳು.

ಕೊನೆಗೆ ಅರಸನನ್ನೇ ಅಲ್ಲಿಗೆ ಬರಮಾಡಿಕೊಳ್ಳುವಳು. ಏಕೆಂದರೆ ತನ್ನ ತಾಯಿ – ತಂದೆಗಳಿಗೆ ಸಂಕಷ್ಟಕೊಡಬಾರದೆಂಬ ಉದ್ದೇಶವಿತ್ತು. ಅರಸನು ಮದುವೆಯಾಗಲು ಹಟ ಹಿಡಿಯುವನು. ಅಕ್ಕನು ತನ್ನ ಇಚ್ಚೆಗಳನ್ನು ಅರಸರ ಮುಂದೆ ಇರಿಸಿ ಈಡೇರಿಸಿಕೊಟ್ಟರೆ, ಒಪ್ಪುವೆನೆಂದು ಹೇಳುವಳು. ಲೌಕಿಕ ಗತಿ ನಿಯಮಗಳಿರಬೇಕೆಂದು ತಿಳಿಯದ ಅರಸನು ಪ್ರಮಾಣವಚನ ಸ್ವೀಕರಿಸುವನು.

ಶಿವಭಕ್ತನಾಗಲು ಒಪ್ಪಿಕೊಂಡರೆ ಸಾಧ್ಯವೆಂದು ಅಕ್ಕ ಹೇಳಿದರೆ "ಇದೇನು ಮಹಾ" ಎಂದು ಒಪ್ಪಿಕೊಂಡ ಕಾರಣ ಅಕ್ಕ ಅರಮನೆಗೆ ನಡೆದಳು. ಮನಸ್ಸಿಲ್ಲದ ಅಕ್ಕ ಅರಸು ಶಿವಭಕ್ತನಾದ ಕಾರಣ ಶಿವೋಪಾಸನೆಗಾಗಿ ಸಂತೋಷವಾಗಿ ನಡೆದಳು. ಲೌಕಿಕ ಬಾಧೆಯಿಂದ ಅರಸು ಕಾಮ ಪರವಶನಾಗಿ ಅವಳಲ್ಲಿ ಅನುರಕ್ತನಾಗಲು ಪ್ರಣಯ ಚೇಷ್ಟೆಗೆ ಮುಂದಾದನು.

ಕೂಡಲೇ ಅಕ್ಕನು ಅವನ ತಪ್ಪನ್ನು ತಿಳಿಸಿಕೊಟ್ಟು, ಶಿವ ಭಕ್ತನಾಗುವಿ ಎಂದು ವಚನ ಕೊಟ್ಟ ಕಾರಣ ನಡೆಯಿಸಿಕೊಡು ಎಂದೆನ್ನುವಳು. ಅರಸನು ಶಿವಭಕ್ತನಾಗಲು ಸಮಯವಿದಲ್ಲ ಎಂದು ಸ್ಪಷ್ಟವಾಗಿ ಹೇಳಿ ಬಗೆ – ಬಗೆಯಿಂದ ಅವಳನ್ನು ಕೇಳಿಕೊಳ್ಳುವನು. ಅವಳ ರೂಪಕ್ಕೆ ಮಾರುಹೋದ ಅರಸು ಬಲತ್ಕಾರಕ್ಕೆ ಹೋಗುವನು. ಶಿವಭಕ್ತಳಾದ ಅಕ್ಕನಲ್ಲಿಯ ಜ್ಞಾನದ ಮಿಂಚು ಅರಸನ ಅಜ್ಞಾನವನ್ನು ಸುಟ್ಟು ಬಿಡುವನು. ಸರಸರನೇ ಅಕ್ಕನು ಉಡಿಸಿ–ತೊಡಿಸಿದ ಆಭರಣಗಳನ್ನೆಲ್ಲಾ ಕಳಚಿ ಒಗೆಯುವಳು.

ಇಂತೀ ದೇಹವನ್ನು ನೀನು ಅರಿಯಲಾರೆ, ಇದಕ್ಕೆ ಏತಕ್ಕೆ ನಿನ್ನ ಆತುರ ಇಂಥ ಕಾರ್ಯವನ್ನು ನೆಚ್ಚಿ ಕೆಡದಿರು ಎಂದು ಶಿವತತ್ವವನ್ನು ಅರಸನಿಗೆ ಹೇಳಿ ಜ್ಞಾನೋದಯವನ್ನುಂಟು ಮಾಡುವಳು. ಶಿವನಿಗಿಂತ ಅಧಿಕರು ಯಾರಿಲ್ಲ, ಶಿವನಿಗೆ ಅರ್ಪಿತವಾದ ಈ ದೇಹ ನಿನಗೆ ತಕ್ಕದಲ್ಲ ಅದರಿಂದ ನಿನಗೆ ಕೆಡಕಾಗದಿರದು ಕಾಮ ಬಲ್ಲಿದನೆಂದರೆ ಉರುಹಿ ಭಸ್ಮ ಮಾಡಿದ, ಬ್ರಹ್ಮ ಬಲ್ಲಿದನೆಂದರೆ ಶಿರವ ಚಿವುಟಿಯಾಡಿದ ಎಲೆ ಅವ್ವ ಕೇಳಾ ;

ಶಿವನು ಮರಣ ಹೊಂದುವ ಗಂಡನಲ್ಲ ಯಾವ ಕಾಲದಲ್ಲಿಯೂ ಚಿರಸ್ಥಾಯಿಯಾಗಿ ಇರುವವನಾದ ಕಾರಣ ಮೃತ್ಯುಂಜಯನಾದನು. ಈತನೆ ನನಗೆ ನಿಜವಾದ ಪತಿ, ಅವನನ್ನು ಹೊಂದಲು ಬಟ್ಟೆ ಬಯಲಾಗಿ ಹೊರಡುವೆನೆಂದು ಹೊರಡುವಳು. ಈ ಗತಿಯನ್ನು ನೋಡಿದ ತಾಯಿ – ತಂದೆಯರು ಅಕ್ಕನನ್ನು ತಡೆಯುವರು.

ಅಕ್ಕನು ಕಲ್ಯಾಣದಲ್ಲಿ ಶಿವಶರಣರ ಅನುಭವ ಮಂಟಪಕ್ಕೆ ಹೋಗುವಳು. ಅಲ್ಲಿ ಬತ್ತಲೆಯಾಗಿ ಧಾವಿಸಿದೊಡನೆ, ಭೋಗ – ಶರಣರೆಲ್ಲ ಅವಧರಿಸಿ, ಕಾಮಿಯಾಗಿ ನಿಷ್ಕಾಮಿಯಾದಳು. ಸೀಮೆಯಲ್ಲಿದ್ದು ನಿಸ್ಸೀಮೆಯಾದಳು. ಭವಿಯ ಸಂಗ ತೊರೆದು ಭವಬಾಧೆ ಹರಿದಳು. ಬಸವಣ್ಣ ಗತಿ ಎಂದು ಬರಲು ನಾನು ಮಡಿ ಹಾಸಿ ನಡೆಸಿದೆ. ನೆಡೆವುದರೆ ಹಾಸಿದ ಮಡಿ ಸರ್ವಾಂಗಕ್ಕೆ ಹೊದ್ದಳು. ಈ ಮಹಾದೇವಿಯಕ್ಕನ ನಿಲುವು ಶರಣರಿಗೆ ವೇದ್ಯ, ಎಂದು ಹೇಳಿದ ಮಧುವರಸನ ನುಡಿ ಗಂಟೆ ಶಿವಶರಣರ ಸಮೂಹವನ್ನೇ ಎಚ್ಚರಿಸಿತು.

ಬತ್ತಲೆಯಾದುದಕ್ಕೆ ಪ್ರಭು ಅಕ್ಕನೊಡನೆ ಸಂವಾದ ಹೂಡಿದನು. ಅಕ್ಕ ಅದರ ಒಳಗುಟ್ಟನ್ನು ಬಿಡಿಬಿಡಿಯಾಗಿ ಹೇಳಿ ಶರಣರನ್ನು ತಲೆಯಾಗಿಸಿದಳು. ಬಸವಣ್ಣನು ಅಕ್ಕನು ಜೀವನಕ್ಕೆ ತಲೆಬಾಗಿ ನೂರಾರು ಸಾರಿ ಹೊಗಳಿದನು. ಶರಣ ಸಮಾಜವೇ ಹೊಗಳಿತು. ಎಲ್ಲರೂ ಹರಿಸಿದರು. ಅಕ್ಕನು ಅಪೇಕ್ಷಿಸಿದಂತೆ ಗುರು ದರ್ಶನ ಹಾಗೂ ಅಣ್ಣನ ಮಾರ್ಗದರ್ಶನವೂ ಆಯಿತು.

ಅಕ್ಕನು ಕೌಶಿಕನೊಡನೆ ಲಗ್ನವಾಗಿರುವಳೆಂದೂ, ಲಗ್ನವಾಗುವ ಮುನ್ನ ಅಕ್ಕನು ಕರಾರು ಹಾಕಿದ್ದಳೆಂದೂ, ಅವುಗಳನ್ನು ಅರಸನು ನಡೆಸಿಕೊಂಡದ್ದರಿಂದ ಅವನನ್ನು ದೂರೀಕರಿಸಿ ಕಲ್ಯಾಣದೆಡೆಗೆ ಹೊರಟು ಹೋದಳೆಂಬುದು ಸಹಜವಾಗಿ ಕಾಣುತ್ತದೆ.

ಅಕ್ಕನವರಿಗೆ ವಿವಾಹ ಒಂದು ರೀತಿಯಿಂದ ವೈವಾಹಿಕ ಜೀವನ ಕೆಡಕಲ್ಲ. ಅದು ಅಕ್ಕನ ಚರಿತ್ರೆಗೆ ಬಾಧಕವೂ ಅಲ್ಲ ರಾಜನಾದ ಕೌಶಿಕನು ಅಕ್ಕನ ರೂಪಕ್ಕೆ ಮರುಳಾಗಿರಬಹುದು. ಕಾಮ ವಾಸನೆಯಿಂದ ಬಲತ್ಕಾರಕ್ಕೆ ಕೈಹಾಕಿರಬೇಕು. ಮೇಲಾಗಿ ರಾಜಾಜ್ಞೆಯನ್ನು ಉಲ್ಲಂಘಿಸುವುದೆಂದರೆ ಅಪರಾಧ. ಇಂಥ ಇಕ್ಕಟ್ಟಿನಲ್ಲಿ ಸಿಕ್ಕ ಅಕ್ಕನು ತನ್ನ ತಂದೆ – ತಾಯಿಗಳ ಮರ್ಯಾದೆಗೆ ಧಕ್ಕೆ ಬರಬಾರದೆಂದು ಮದುವೆಗೆ ಒಪ್ಪಿರಬಹುದು. ಕರಾರು ತಪ್ಪಿದ ಮೇಲೆ ಎಲ್ಲವನ್ನೂ ತೊರೆದು ಕಲ್ಯಾಣದತ್ತ ಸಾಗಿರಬಹುದು. ಅಕ್ಕನಿಗೆ ನಿಂದೆ ಮಾಡಬೇಕೆಂಬುದೇನೂ ಇಲ್ಲ. ಅವನು ತಿಕ್ಕಿದ ಕೊರಡು ಹೆಚ್ಚಿದ ಗಂಧ ಮತ್ತು ಸುವಾಸನೆ ಬೀರಿದೆ. ಅಕ್ಕನ ಜೀವನ ಅದರಿಂದಲೇ ಹೆಚ್ಚು ಪವಾಡವಾಗಿದೆ ಎನ್ನಬಹುದು.

ಸಾಮಾನ್ಯವಾಗಿ ವಚನದಲ್ಲಿ ಬರುವ 'ಸಾವಿಲ್ಲದ ಕೇಡಿಲ್ಲದ ರೋಹಿಲ್ಲದ ಚೆಲುವಂಗೆನೊಲಿದೆನವ್ವ' ಹಾಗೂ 'ಹರನೇ ಗಡನಾಗಬೇಕೆಂದು ಬಹುಕಾಲ ತಪಸ್ಸಿದ್ದೆ ನೋಡಾ' ಎಂದು ತನ್ನ ಜೀವನದಲ್ಲಿಯ ಕಷ್ಟ ನೆನೆದು ತನ್ನ ಮನವನ್ನೇ ಬಿಚ್ಚಿ ಹೇಳಿದ್ದಾಳೆ. 'ಅಮೇಧ್ಯದ ಹಡಕೆ ಮೂತ್ರದ ಕುಡಿಕೆ' ಎಂದು ಹೇಳುವ ವಚನ ರಾಜನಿಗಲೆ ಸಂಬಂಧಿಸಿದುದೇ ಇರಬೇಕು.

ಅಕ್ಕನ ಸೌಂದರ್ಯ ಮತ್ತು ಲಗ್ನದ ಬಗ್ಗೆ ಹೊಳೆದಿರುವುದು ಮಹಾ ವಿಷಾದಕರ. ಈ ಕವಯತ್ರಿರು ಎಲ್ಲಾ ತಪಸ್ಸಿನಿಂದ ಅಕ್ಕನ ದಿವ್ಯ ಪವಿತ್ರ ಶುದ್ಧ ನಿರ್ಮಲ ತ್ಯಾಗ ಪೂರ್ಣಚರಿತ್ರೆಗೆ ಕಳಂಕ ಬಂದಿದೆ ಅದೇನೋ ನಿಜವಾದ ಕಳಂಕವಲ್ಲ. ಕವಯತ್ರಿಯರೂ ಕುರುಡುತನದಿಂದ ಬರೆದಿರುವುದು ಮಾತ್ರ ಕಳಂಕವಾಗಿದೆ. ಆದರೆ ಬೆರಳೆಣಿಕೆಯಷ್ಟು.

ನಮ್ಮ ಆಧುನಿಕ ಕವಯತ್ರಿಯರು ಬರೆದಿರುವುದರಿಂದ ಅವರ ಹೃದಯ ಎಂದಿಗೂ ಕುರುಡು ಆಗಲಾರದು. ರವಿ ಕಾಣದ್ದನ್ನು ಕವಿ ಕಾಣುವ ಎನ್ನುವ ಮಾತು ಕವಿಗಳಿಗೆ ಅಥವಾ ಕವಯತ್ರಿಯರಿಗೆ ಅನ್ವಯಿಸುವುದೇ ವಿನಃ ಇನ್ನಾರಿಗನ್ವಯಿಸುವುದು ? ನಮ್ಮ ಕವಯತ್ರಿಯರ ದೃಷ್ಟಿ ಪರಿಶುದ್ಧ ದೃಷ್ಟಿ. ಆದರೆ ಯಾವುದೋ ಆಧಾರದಿಂದ ಬರೆದಿರಬೇಕು. ವಿದ್ವಾಂಸರು ಹೇಳಿದ ಮಾತು ಕವಯತ್ರಿಯರ ಎಲ್ಲ ಕವನಗಳಿಗೂ ಅನ್ವಯಿಸಿದರೆ ತಪ್ಪಾಗದು ಆಗ ಎಲ್ಲರಿಗೂ ಪ್ರಮಾದವೆನಿಸಬಹುದು. ಬರೀ ಕವನಗಳಿಂದ ವಚನಗಳಿಂದ ಅಕ್ಕನ ನಿಜವಾದ ಸೌಂದರ್ಯ ಹೊರಬೀಳಲಾರದು. ಇನ್ನೂ ಹೆಚ್ಚೆಚ್ಚು ಸಂಶೋಧನೆಯಾಗಬೇಕಾದುದು ಅಗತ್ಯವಾಗಿದೆ.

ವೈವಾಹಿಕ ಜೀವನವನ್ನು ನಷ್ಟವಲ್ಲವೆಂದು ಎಲ್ಲಾ ಸಾಹಿತಿಗಳೂ ಹೇಳಿದ್ದಾರೆ.

ವೈವಾಹಿಕ ಜೀವನವು ಅವಳ ಮನಸ್ಸಿನಲ್ಲಿಯೇ ಇರಲಿಲ್ಲ. ಒಂದು ಕಟ್ಟುನಿಟ್ಟಿಗೆ ತಲೆಬಾಗಿದ್ದಾಳೆ. ಶಿವಭಕ್ತನಾದ ಅರಸು ಕೌಶಿಕನನ್ನು ಸೋಲಿಸಿರುವಳು. ಸ್ವಲ್ಪ ವಿಚಾರಿಸಿದರೆ ಅಕ್ಕನು ವೈರಾಗ್ಯ ತಾಳಲು ಯಾವುದಾದರೊಂದು ಘಟನೆಯು ಇರಲೇಬೇಕು ಅಂದರೆ ಆಕೆಯ ಸೌಂದರ್ಯದ ನಡುವೆ ಬೆತ್ತಲೆ ಹೊರಡುವ ಕಾರಣವೇನು ? ಕೌಶಿಕನಿಗೆ ಬಲತ್ಕರಿಸುವ ಮನಸ್ಸಾದಾಗ ಅವನಿಗೆ ಅದರ ಪರಿಣಾಮವಾಗಿ ಜ್ಞಾನ ಉಂಟಾಗಲು ಮಾಡಿದ ಅಕ್ಕನ ಸಾಧನೆ ಸಿದ್ಧಯೋಗ ಇರಬೇಕು.

ಯಾವ ದಾರಿಯೂ ಅಕ್ಕನಿಗೆ ಬಾಧೆ ಕೊಡಲಾರದು. ಇದರ ಬಗ್ಗೆ ಸಂಶೋಧಕರ ಸಂಶೋಧನೆ ಪರಿಶುದ್ಧ ಹೃದಯದಿಂದ ಆಗಬೇಕು. ಯಾವ ಅಭಿಪ್ರಾಯವೂ ಅಕ್ಕನ ವಿರಕ್ತಿಗೆ ಚ್ಯುತಿ ಬರಲಾರದು.

ಒಟ್ಟಾರೆ ಅಕ್ಕನ ಆದರ್ಶ ಜೀವನ ಕನ್ನಡ ಸ್ತ್ರೀ ಚರಿತ್ರೆಯಲ್ಲಿಯೇ ಸುವರ್ಣಾಕ್ಷರಗಳಿಂದ ಬರೆಯುವಂಥದ್ದು. ಅಕ್ಕನ ವೈರಾಗ್ಯ ಸಮರಸಗಳ ಸಾಧನಾ ಸಿದ್ಧಿಯೋಗ, ಆದರ್ಶ ಜೀವನದ ಉಚ್ಚಶ್ರೇಯ ಪರಿಶುದ್ಧ ಹೃದಯ, ಭಾವನಾ ಆದೇಶ, ಮಧುರ ಕಾವ್ಯವಾಣಿ, ಪರಶಿವನೇ ಪತಿ ಎಂಬ ಘೋಷಣೆ, ಭಾವಗೆಡೆಯಬೇಕೆಂಬ ಹಟಯೋಗ, ಸದಾಚಾರ, ಸದ್ಭಕ್ತಿ, ಮನೋಗತ, ಜ್ಞಾನಭಾವನೆ, ಶರಣಸ್ನೇಹ, ಜಂಗಮಸೇವೆ, ಕಾಯಕ ನಿಷ್ಠೆ, ಅಂತರಂಗ ಶುದ್ಧಿ, ಇವೇ ಮೊದಲಾಗಿ ಅಕ್ಕನ ಸೌಂದರ್ಯ, ಆದರ್ಶ ಜೀವನದಿಂದ ಕಲಿಯಬೇಕಾದ ಜ್ಞಾನ, ನಿಧಿ – ನಿಧಾನಗಳು, ಅಕ್ಕನು ಕನ್ನಡ ಸೌಂದರ್ಯದ ಕವಿಯೋಗಿನಿ, ಪುಣ್ಯಶಾಲಿನಿ, ನಮ್ಮ ಭಾಗ್ಯದ ಸೌಂದರ್ಯದ ಬೆಳದಿಂಗಳು, ಸಾತ್ವಿಕ ಪ್ರಕಾಶದಿಂದ ನಮ್ಮ ಕನ್ನಡ ಕಾವ್ಯ ಶಕ್ತಿಯುಳ್ಳದ್ದಾಗಿದೆ. ಅಂಥ ಅಕ್ಕನ ಚರಿತ್ರೆ, ವಚನ, ಅವಳ ನಿಲುವು ಯಾರಿಗೆ ಬೇಡ ? ಕನ್ನಡಿಗರು ಅವಳನ್ನು ಸೌಂದರ್ಯದ ನೆಲೆಯಲ್ಲಿ ನೆನೆ ನೆನೆದು ಅವಳ ಜೀವನದ ಆದರ್ಶ ಮಹೋನ್ನತ ನುಡಿಗಳನ್ನು ಹಾಡಿ ಹಾಡಿ ತಣಿಯಬೇಕು.

ಈ ದೇಹ ಸೌಂದರ್ಯದ ಬಂಧನವನ್ನು ಪರಮಾತ್ಮನಲ್ಲಿ ಅಚಲವಾದ ಮನೋಭಾವನೆಯನ್ನಿಟ್ಟು ಗೆದ್ದೆ, ಮನದ ಬಂಧನವನ್ನು ಜ್ಞಾನದಿಂದ ತಿಳಿದೆನು. ಜೀವನಕ್ಕೆ ಬಂದ ಕುಂದನ್ನು ಶಿವಾನುಭವದಿಂದ ಗೆದ್ದೆನು. ಕರಣಂಗಳ ಅಜ್ಞಾನವನ್ನು ಜ್ಞಾನ ಜ್ಯೋತಿಯಿಂದ ಪರಿಹರಿಸಿದೆ. ಅಕ್ಕನ ಸೌಂದರ್ಯ ಯೌವ್ವನದ ಹೊರ ಮಿಂಚಿನಲ್ಲೇ ನಿಮ್ಮ ಕಣ್ಣಿಗೆ ಕಾಣುವ ಕಾಮನನ್ನು ಸುಟ್ಟೆ, ಭಸ್ಮವೇ ಸರಿ ದೇವನೇ ! ಕಾಮುಕಗಳಾಗದೆ ವೈರಾಗ್ಯದ ಅಂಜಿಕೆಯನ್ನು ತಲುಪಿದೆ ಇದೇ ನನಗೆ ವೈರಾಗ್ಯದ ಗುಟ್ಟು.

---

(ಶಿವಾನಂದ ಸ್ವಾಮಿಗಳು ಗವಿಮಠ ಲೇಖನ ಶಿವಾನುಭವದ ಸಂಚಿಕೆ ೨, ಸಂಪುಟ ೩೪)

"ಹಣ್ಣು ಮೆದ್ದ ಬಳಿಕ ಮರವನಾರು ತರಿದರೇನು ?
ಹೆಣ್ಣು ಬಿಟ್ಟ ಬಳಿಕ ಆಕೆಯನಾರು ಕೂಡಿಕೊಂಡರೇನು ?
ಮಣ್ಣು ಬಿಟ್ಟ ಬಳಿಕ ಆ ಕೈಯ್ಯುವನಾರುತ್ತರೇನು ?"

ಅಕ್ಕ ಸೌಂದರ್ಯದ ದೃಷ್ಟಿಯಿಂದ ನೋಡುವುದಾದರೆ, ಅಂದರೆ ಮರದಲ್ಲಿರುವ ಹಣ್ಣು ಹರಿದ ಮೇಲೆ ಆ ಮರವನ್ನು ಯಾರು ಹತ್ತಿದರೇನು ? ಸುಖ ಅಂದರೆ ಮೊದಲೆ ಅದರಲ್ಲಿಯೆ ಸಾರವನ್ನು ಪಡೆದ ಮೇಲೆ ಅದೇ ರೀತಿ ಹೆನ್ನು ಬೇಡಾಗಿ ತಿರಸ್ಕರಿಸಿದ ಬಳಿಕ ಆಕೆಯನ್ನು ಆಕೆಯ ಸೌಂದರ್ಯವನ್ನು ಯಾರು ಭೋಗಿಸಿದರೆ ಫಲವೇನು ಸಿಗುತ್ತದೆ. ಆಕೆಯಲ್ಲಿರುವ ಸೌಂದರ್ಯದ ಸತ್ವವನ್ನು  ಹೀರಿಯೂ ಪ್ರಯೋಜನವೇನು ? ಅದೇ ರೀತಿ ಮಣ್ಣು ಕೊಚ್ಚಿಕೊಂಡು ಹೋದ ಮೇಲೆ ಮತ್ತೆ ಹಾಕಿದರೆ ಪ್ರಯೋಜನವಿಲ್ಲ ಅಂದರೆ 'ನಾಯಿ ತಿಂದು ನೀರು ಕುಡಿದರೇನು ? ಸುಖವಿಲ್ಲ ; ಪ್ರಯೋಜನವಿಲ್ಲ'. ಎಂಬ ಹೇಳಿಕೆಯನ್ನು ನಾವು ಕೆಲವೊಂದು ಕವನಗಳು ಮತ್ತು ವಚನಗಳ ಮೂಲಕ ತಿಳಿಯಬಹುದು. ಪುರುಷ ಹಾಗೂ ಸ್ತ್ರೀ ಇವುಗಳು ಲೌಕಿಕದಲ್ಲಿ ಪರಸ್ಪರ ಹೊಂದಿಕೆಯಾಗಿವೆ. ಲೌಕಿಕರಿಗೆ ಶಿವಶರಣರ ನಡೆ – ನುಡಿ ಅಸಹ್ಯವಾಗಿಯೇ ತೋರುವುದು. ಕಾಮವಾಚನೆಯ ಜನರು ಹುಚ್ಚರೆಂದು ಬಗೆದು ತಮ್ಮ ವಿನಾಶಕ್ಕೆ ಕಾರಣರಾಗುವರು.

"ಅಕ್ಕ ತನ್ನ ಸೌಂದರ್ಯ ಮತ್ತು ಗುಣಗಳನ್ನು ಕುರಿತು ವಚನಗಳಲ್ಲಿ ಹೀಗೆಂದಿದ್ದಾಳೆ.
ಚೆಂದನವ ಕಡಿದು ಕೊರೆದು ತೇದಡೆ ನೊಂದೆನೆಂದು
ಕಂಪ ಬಿಟ್ಟಿತ್ತೆ ! ತಂದು ಸುವರ್ಣವ ಕಡಿದೊಗೆಡೊಡೆ
ಬೆಂದು ಕಳಂಕ ಹಿಡಿದಿತ್ತೆ ಸಂದು ಸಂದು ಕಡಿದ
ಕಬ್ಬುನವ ಗಾಣದಲಿಕ್ಕೆ ಬೆಂದು ಪಾರಾಗುಳ್ಳ
ಸಕ್ಕರೆಯಾಗಿ ನೊಂದೆನೆಂದು ಸಿವಯ ಬಿಟ್ಟಿತ್ತೆ !
ನಾ ಹಿಂದೆ ಮಾಡಿದ ಹೀನಗಳೆಲ್ಲವ ತಂದು
ಮುಂದಿಳುಹಲು ನಿಮಗೆ ಹಾನಿಯೇ ?
ಎನ್ನ ತಂದೆ ಮಲ್ಲಿಕಾರ್ಜುನ ದೇವಯ್ಯಾ !
ಕೊಂದಡೆ ಶರಣೆಂಬುದು ಮಾಣೆ ॥"

ಸೌಂದರ್ಯದ ಸ್ವರೂಪದಲ್ಲಿ ಆಕೆ ಹೇಳುವಂತೆ ಶ್ರೀಗಂಧದ ಕೊರಡು ತಿಕ್ಕಿದಂತೆ ತನಗೆ ನೋವಾಗುವದೆಂದು ಸುವಾಸನೆಯನ್ನು ತ್ಯಜಿಸುವುದೇ ? ಆ ಕೌಶಿಕನ ಆಕ್ರಮಣಕಾರಿ ಸೌಂದರ್ಯವನ್ನು ಸೆರೆ ಹಿಡಿಯುವ ಸಂದರ್ಭದಲ್ಲಿ ಆಕೆ ಮನಸ್ಸಿಗೆ ಬಂದಂತೆ ತನ್ನಲ್ಲೇ ತೋಡಿಕೊಳ್ಳುತ್ತಾಳೆ. ಅದೇ ರೀತಿ ಬಂಗಾರವನ್ನು ಕಡಿದು ಚೂರು ಚೂರು ಮಾಡಿದರೂ ತನ್ನ ಕಳೆಯನ್ನು ಕಳೆದು ಕೊಳ್ಳುವುದಿಲ್ಲ. ಅಂದರೆ ಸೌಂದರ್ಯವನ್ನು ದೇಹದಲ್ಲಿ ಯೌವ್ವನ ತುಂಬಿ

ತುಳುಕುತ್ತಿರುವಾಗ ಕಾಣಬಹುದು. ಆದರೆ ಸೌಂದರ್ಯ ಮತ್ತು ದೇಹವನ್ನು ಬೇರ್ಪಡಿಸಲು ಸಾಧ್ಯವಿಲ್ಲ. ಕಬ್ಬನ್ನು ಗಾಣದಲ್ಲಿ ತಿರುವಿದಾಗ್ಯೂ ಮರಗಿ ಮುಂದೆ ಸಕ್ಕರೆಯಾಗಿ ನೊಂದೆನೆಂದು ಸಿಹಿ ಕೊಡುವುದನ್ನು ಬಿಡುವದೇ ? ಸಜ್ಜನರಿಗೆ ಎಂಥ ವಿಪತ್ಕಾಲ ಬಂದರೂ ತಮ್ಮ ಒಳ್ಳೆಯ ಗುಣಗಳನ್ನು ಬಿಡಲಾರರು ಕೌಶಿಕ ಆಕೆಯ ಗುಣಗಳನ್ನು ಪರೀಕ್ಷಿಸದೇ ಆಕೆಯ ಸೌಂದರ್ಯವನ್ನು ನೋಡಿ ಸೌಂದರ್ಯದ ದೃಷ್ಟಿಯಿಂದ ಕಾಮುಕಾಸಕ್ತಿಯಿಂದ ಆಕೆಯನ್ನು ವರಿಸಲು ಪ್ರಯತ್ನಿಸುತ್ತಾನೆ.

ಸಾಹಿತ್ಯ, ಚಳುವಳಿ, ವಿಜ್ಞಾನಗಳ ಸ್ಪರ್ಶದಿಂದ ಸ್ವಯಂ ಚಿಂತನೆಯ ಪ್ರಜ್ಞೆಯನ್ನು ಸೃಷ್ಟಿಸಿಕೊಂಡಿರುವ ನಾನು ಅಕ್ಕಮಹಾದೇವಿಯ ವಚನಗಳನ್ನು ಸ್ವಲ್ಪಮಟ್ಟಿಗೆ ಮೆಲುಕು ಹಾಕಲು ಬೆವರಿದ್ದೇನೆ. ಭಾರತ ಎಂಬ ಈ ಸಮಾಜದಲ್ಲಿ 'ಅಸ್ಪೃಶ್ಯ' ಎಂಬ ನೋವಿನ ಕಾಯಕ ಹೊತ್ತು ಪರಕೀಯತೆ, ಅಸಮಾನತೆ, ಹಸಿವು, ಅವಮಾನ ಹಾಗೂ ಭವಿಷ್ಯವೆಂಬ ಕನಸಿನ ಹಿಂಸೆಯ ಸ್ಮೃತಿ ಹೊಂದಿರುವ ನಾನು ಅಕ್ಕನನ್ನು ಆರಾಧಿಸುವ ಮನೆಗಳಿಗೆ ಕಾಲಿಟ್ಟರೆ ಹತ್ಯೆಗೊಳಗಾಗುವ ಸಾಮಾಜಿಕ ವಾಸ್ತವ ಇದೆ.

ಕಾಯದ ಪ್ರಜ್ಞೆಯ ಸಹಜತೆಗೆ ಪರಿಣಾಮವಾಗಿ 'ಸಮಾಜ' ಎಂಬ ಸಂಬಂಧ ರೂಪುಗೊಂಡಿದೆ. ಪ್ರಾಣದ ಶೋಷಣೆಗೆ ಬರೀ ಅಭಿಮಾನಗಳಾಗಿ ಉಳಿದಿವೆ. ಅಭಿಮಾನಗಳು ಆಚರಣೆಗಳಾಗಿ ಕ್ರಮೇಣ ಅಧಿಕಾರಗಳಾಗುತ್ತವೆ. ಕಾಯವನ್ನು ಚಟದಂತೆ ಕಾಡುತ್ತವೆ. ಇವೇ ಕಾಯದ ಸೌಂದರ್ಯಗಳಾಗಿ ಜೀವನವೆಂಬ ಅರ್ಥ ಪಡೆಯುತ್ತವೆ.

ಕಾಯವನ್ನು ನರಳಿಸುವ ಅಭಿಮಾನಾತ್ಮಕ ಹಾಗೂ ಆಕಾರಾತ್ಮಕ ಅಧಿಕಾರದ ನೆಲೆಗಳೇ ಆಕ್ರಮಣಕಾರಿ ಸೌಂದರ್ಯಗಳು. ಭಾರತದಂತಹ ಜಾತಿ, ಧರ್ಮ ಹಾಗೂ ಪುರಾಣ ಸನಾತನತೆಯ ಸಮಾಜದಲ್ಲಿ ಇಂತಹ ಅಪಾಯಕಾರಿ ಸೌಂದರ್ಯಗಳೇ ಅತಿದೊಡ್ಡ ಪ್ರಭುತ್ವಗಳಾಗಿ ಪ್ರಾಣಗಳನ್ನು ಹಿಂಸಿಸುತ್ತಿವೆ. ಇಂತಹ ಆಕ್ರಮಣಕಾರಿ ಸೌಂದರ್ಯಗಳ ವಿರುದ್ಧದ ಮಹಾದಂಗೆಯೇ ಅಕ್ಕಮಹಾದೇವಿ.

ಬಹಿರಂಗದ ಕೃತಕ ಸೌಂದರ್ಯಗಳ ಬಲತ್ಕಾರವನ್ನು ಸೀಳಿಕೊಂಡು ಚಿಮ್ಮಿದ ಅಂತರಂಗದ ಕ್ರಿಯಾಶೀಲತೆ ಹಾಗೂ ಸ್ವಾತಂತ್ರ್ಯದ ಚಿಲುಮೆಯೆ ಅಕ್ಕನ ಸೌಂದರ್ಯದ ದರ್ಶನಗಳು.

ಸೌಂದರ್ಯವನ್ನೇ ತನ್ನ ಸಂವಿಧಾನವನ್ನಾಗಿಸಿಕೊಂಡು ಸಮಕಾಲೀನ ಕಾಯಕ್ಕೆ ಒಂದು ಕಾಲವಾಗುವ, ಭಾಷೆಯಾಗುವ, ಸಂಸ್ಕೃತಿಯಾಗುವ, ಅನುಭಾವವಾಗುವ ಕಲೆ ನಾಶವಾಗುತ್ತಿದೆ. ಇದು ಈ ಕಾಲ ಎದುರಿಸುತ್ತಿರುವ ಬರ್ಬರತೆ ಇಂಥ ಕ್ರೂರ ಸೌಂದರ್ಯವೇ ಜಾಗತೀಕರಣ. ಜೀವಹತ್ಯೆಯ ಈ ಸೌಂದರ್ಯ ಭಾರತೀಯ ಸಂಸಾರದ ವೇಷದಲ್ಲಿ ಮತ್ತಷ್ಟು ಗಂಭೀರತೆ ಪಡೆದಿದೆ. ಮಾರುಕಟ್ಟೆ ರಾಜಕಾರಣದ ಸಖ್ಯದಲ್ಲಿ ಇದು ತಾರಕ್ಕೇರುತ್ತಿದೆ. ಇಂಥ ಸೌಂದರ್ಯದ

ಸ್ವರೂಪವನ್ನು ಹಾಗೂ ಇದರಿಮದ ಮುಕ್ತಗೊಳ್ಳಬಹುದಾದ ಮಾರ್ಗವನ್ನು ಅಕ್ಕನಲ್ಲಿ ಕಾಣಬಹುದು.

ಅಕ್ಕ ಇಲ್ಲಿ ಚೆನ್ನಮಲ್ಲಿಕಾರ್ಜುನ ಕೃತಕ ಹಾಗು ಬಲಾತ್ಕಾರ ಸೌಂದರ್ಯದ ವಿರುದ್ಧದ ಪ್ರಕೃತಿ. ಆ ಪ್ರಕೃತಿ ಕಾಯದೊಳಗಿನ ಸುಪ್ತಚೇತನ. ಅಕ್ಕನು ಕಾಣಿಸುವ ಈ ಎಚ್ಚರ ಪ್ರಸ್ತುತ ಮಾರುಕಟ್ಟೆ ಪ್ರಭುತ್ವವನ್ನು ಧಿಕ್ಕರಿಸಿ ನಮ್ಮತನಗಳನ್ನು ಕಾಪಾಡಿಕೊಳ್ಳುವ ಬಗೆಯಾಗಿದೆ. ಆತ್ಮಹತ್ಯಾತ್ಮಕ ಸೌಂದರ್ಯಗಳನ್ನು ಮೀರುವ ಮೂಲಕ ಮಾತ್ರ ಆತ್ಮ ವಿಕಾಸ ಸಾಧ್ಯ. ಅಕ್ಕ ಪ್ರತಿಪಾದಿಸುವ ಚೆನ್ನಮಲ್ಲಿಕಾರ್ಜುನ ಈ ಸೌಂದರ್ಯದಲ್ಲಿ ದಮನಗೊಳಿಸುವ ಪ್ರತಿ ಸೌಂದರ್ಯ, ಸೃಜನಶೀಲತೆ, ಸ್ವಾತಂತ್ರ್ಯ ಹಾಗೂ ಪ್ರತಿರೋಧಕ ಶಕ್ತಿಯ ಒಂದು ಆತ್ಮ ಚೈತನ್ಯ ಇದು..... ನಿರಾಕ್ರಮಣ ಮತ್ತು ಅಹಿಂಸೆಯ ಆನಂದ. ಈ ಆನಂದಕ್ಕೆ ಕಾಯಕ್ಕೆ ಅನನ್ಯತೆಯನ್ನು ತಂದುಕೊಡುವ ಹಾಗು ಸಮಾಜವನ್ನು ಜಡತೆಯಿಂದ ಬಿಡುಗಡೆಗೊಳಿಸುವ ಅನುಭಾವಿಕತೆಯಿದೆ. ಅಕ್ಕನ ಈ ಸೌಂದರ್ಯದ ಸ್ವರೂಪ ಸಮುದಾಯದೊಳಗೇ ನಿಂತು ಪ್ರತಿಭಟನೆಯ ಭಕ್ತಿಯಾಗುವಂಥ ವಿಶಿಷ್ಟತೆಯಿದೆ. ಜಾತಿಪದ್ಧತಿಯ ವಿಷ ಸೌಂದರ್ಯ ನಾಶ ಮಾಡಿರುವುದಕ್ಕೆ ಅಕ್ಕನಲ್ಲಿ ಕಿಚ್ಚಿದೆ.

ಭಾರತೀಯ ಜಾತಿ ಸಮಾಜದಲ್ಲಿ 'ಸ್ತ್ರೀ' ಎಂಬ ಕಲ್ಪನೆ ಸಂಪೂರ್ಣವಾಗಿ ಗಂಡಿನ ಸೌಂದರ್ಯ ಕಲ್ಪನೆಯ ಭೋಗದಾಹೀ ಶಬ್ದಕೋಶದಿಂದ ಬಂದಿರುವಂಥದ್ದು. ಹೆಣ್ಣಿನ ಅಂಗಾಂಗಗಳ ಮೇಲೂ ಪುರುಷ ಸೌಂದರ್ಯ ಅಪೇಕ್ಷೆಯ ಮುದ್ರೆಗಳಿವೆ. ಅವುಗಳನ್ನೇ ಆಶಯ, ಅಲಂಕಾರಗಳೆಂದು ನಂಬಿಸಲಾಗಿದೆ. ಅವುಗಳಿಲ್ಲದಿದ್ದರೆ ಹೆಣ್ಣಿಗೆ ಅಸ್ತಿತ್ವವೇ ಇಲ್ಲ ಎನ್ನುವಂತೆ ಚಟವನ್ನಾಗಿಸಲಾಗಿದೆ. ಆದ್ದರಿಂದಲೇ ಬಹುಸಂಖ್ಯಾತ ಸ್ತ್ರೀಯರು ಪುರುಷಕೇಂದ್ರಿತ ಅಲಂಕಾರಗಳನ್ನು ಧರಿಸುವ ಮೂಲಕ ತಮ್ಮೊಳಗಿನ ಪ್ರಾಣ ವಿಕಾಸವನ್ನು ಮರೆಯುವಂಥ ನೆಮ್ಮದಿಯಲ್ಲಿ ತೃಪ್ತರಾಗುತ್ತಿದ್ದಾರೆ. ಆದರೆ ಅಕ್ಕಮಹಾದೇವಿ ಇಂಥ ಅಲಂಕಾರ ಭಾಷೆಯನ್ನು ಸೆರೆಮನೆ ಎಂದು ಭಾವಿಸಿ ಅವುಗಳನ್ನು ಭಂಜಿಸಿ ಪ್ರತಿ ಸೌಂದರ್ಯವನ್ನು ನಿರ್ಮಿಸಿಕೊಳ್ಳುವ ಕಡೆ ನಡೆಯುತ್ತಾಳೆ.

ಪುರುಷ ವಿರೋಧಿ ಧೋರಣೆಯ ಅಘಟಿತ ಆದರ್ಶವನ್ನು ಅಭಿಮಾನವಾಗಿ ಅಕ್ಕ ಪ್ರತಿಪಾದಿಸದೆ, ತನ್ನ ಸ್ಪಷ್ಟತೆಯ ಹಾಗು ಬದ್ಧತೆಯ ಘಟಿತ ಸೃಜನಶೀಲ ಮತ್ತು ಸವತಂತ್ರ ಹೋರಾಟವನ್ನು ಅನುಭವವನ್ನಾಗಿ ಮಾಡಿಕೊಂಡಿರುವುದು ವಿಶೇಷ. ಮಾನವ ವಿಕಾಸದ ಜೊತೆ ಜೊತೆಗೆ ಆಶಯಗಳು ಆಕಾರಗಳಾಗಿರುವುದು, ಆಕಾರಗಳು ಅಧಿಕಾರಗಳಾಗಿರುವುದು, ಅಧಿಕಾರಗಳು ಆಯುಧಗಳಾಗಿರುವುದು ದುರಂತ; ವಾಸ್ತವ. ಅಕ್ಕ ಈ ಬಗೆಯ ಆಕಾರಗಳನ್ನು ವಿರೋಧಿಸುತ್ತಾಳೆ. ದೇವರಾಗಲಿ, ಧರ್ಮವಾಗಲಿ, ಆಧ್ಯಾತ್ಮವಾಗಲಿ, ಗಂಡಾನಾಗಲಿ, ಹೆಂಡತಿಯಾಗಲೀ ಆಕಾರಗೊಂಡಾಗ ಕ್ಲೀಷೆಯಾಗಿ ಹಾಗೂ ಅಧಿಕಾರವಾಗಿ ಹಿಂಸಿಸುವುದುಂಟು ಇದೇ ಜಡತೆ. ನಿರಾಕರಣೆ ಮತ್ತು ಸ್ವೀಕರಣೆಗಳ ಆಟ ಅಕ್ಕನಲ್ಲಿನ ವಿಚಿತ್ರ ಹೋರಾಟದ ಕ್ರಮ.

ಪುರುಷದಾಹಿ ಅಲಂಕಾರಗಳ ರಕ್ಷಣೆಯನ್ನು ತೊರೆದು ನಿರ್ವಾಣವೆಂಬ ಪ್ರಕೃತಿಯನ್ನು ಚೆನ್ನಮಲ್ಲಿಕಾರ್ಜುನನ ಬೆಳಗಿಗೆ ಸಮೀಕರಿಸುವ ಅಕ್ಕ 'ಲಜ್ಜೆ' ಎಂಬ ಬಲತ್ಕಾರಕ ಮೌಲ್ಯವನ್ನು ಕೆಡಿಸಿಕೊಳ್ಳುವ ದಿಟ್ಟತನ ತೋರಿದ್ದಾಳೆ.

ಸಾಂಪ್ರದಾಯಿಕ ಹಾಗೂ ಸಿದ್ಧ ಸಾಮಾಜಿಕ ಅರ್ಥಗಳನ್ನು ನಿರಾಕರಿಸುವ ಮೂಲಕ ಅಕ್ಕ ಭಾರತೀಯ ಕೌಟುಂಬಿಕ ಬಂಧನಕ್ಕೆ ಗಂಭೀರವಾದ ಹೊಡೆತವನ್ನು ಉಂಟುಮಾಡಿರುವುದು ಕಂಡು ಬರುತ್ತದೆ. ಹಾಗಾಗಿ ಅಕ್ಕನ ಆಧ್ಯಾತ್ಮಿಕತೆ ಬಂಧನದ ಸಂಸಾರವನ್ನು ವಿರೋಧಿಸುವ ಸ್ವಾತಂತ್ರ್ಯ ಚಳುವಳಿಯಾಗಿ ಗಮನಾರ್ಹವಾಗಿದೆ. 'ದಿಗಂಬರವೇ ದಿವ್ಯಾಂಬರವೆನಗೆ' ಎನ್ನುವ ಮೂಲಕ ಸ್ತ್ರೀ ಸೌಂದರ್ಯದ ಸಿದ್ಧ ನೆಲೆಯನ್ನು ತಿರಸ್ಕರಿಸುವ ಹಾಗೂ ಆ ಮೂಲಕ ಯಜಮಾನ ನೆಲೆಯನ್ನು ಅವಮಾನಿಸುವ ಕ್ರಮ ಅಪೂರ್ವವಾಗಿದೆ. ಅಕ್ಕನ ಚೆನ್ನಮಲ್ಲಿಕಾರ್ಜುನ ನಿರ್‌ಯಜಮಾನಿಕೆಯ ಪ್ರೇಮ ನೆಲೆಯಾಗಿ ರೂಪುಗೊಳ್ಳುವ ಬಗೆ ವಿಶಿಷ್ಟವಾಗಿದೆ. ಹೊರಗಣ ಧಾಳಿಯನ್ನು ಎದುರಿಸಲು ಆ ಧಾಳಿಯ ಬೇರು ಬಿಡುವ ಇಂದ್ರಿಯಗಳಲ್ಲಿ ಅದರ ಬಗೆಗಿನ ತಿರಸ್ಕಾರವನ್ನು ಸೃಷ್ಟಿಸಿಕೊಳ್ಳುವುದು ಒಂದು ಕ್ರಮ. ಅಕ್ಕನಲ್ಲಿ ಕಂಡು ಬರುವ ಈ ಕ್ರಮ ದೇಹ ಮತ್ತು ಮನಸ್ಸುಗಳನ್ನು ಬಾಹ್ಯ ಒತ್ತಡಗಳಿಂದ ರಕ್ಷಿಸಿಕೊಳ್ಳಲು ಹಾಗು ವ್ಯಕ್ತಿತ್ವವನ್ನು ಒಂದು ಕಾಲವಾಗಿ, ಕಲೆಯಾಗಿ, ಭಾಷೆಯಾಗಿ, ಸಂಸ್ಕೃತಿಯಾಗಿ, ಸಮುದಾಯಗಳ ಸಂಬಂಧಿಯಾಗಿ ರೂಪಿಸಿಕೊಳ್ಳಲು ಸಾಧ್ಯವಾಗಿಸುತ್ತದೆ. ಕಾಯದ ಹಸಿವು. ತೃಷೆ, ನಿದ್ರೆಗಳು ಸಿದ್ಧ ಸಮಾಜದ ನಿಯಮ ಮತ್ತು ನಿಯಂತ್ರಣಗಳಿಗೆ ಅನುಗುಣವಾಗಿ ಜರುಗುತ್ತವೆ.

ಭೋಗದ ಬಗೆಗಿನ ರೋಮಾಂಚನಕ್ಕಿಂತ ತನ್ನ ಪ್ರತಿರೋಧ ಚೇತನದ ಬಗೆಗಿರುವ ಪ್ರೀತಿ ಅಕ್ಕನ ಬಹುಮುಖ್ಯ ತತ್ವವಾಗಿದೆ.

ಇಂಥ ಅಕ್ರಮ ಸಂಗಾತದಿಂದ ಪಂಚೇಂದ್ರಿಯಗಳ ಮೇಲೆ ಧಾಳಿ ಮಾಡುತ್ತಿರುವ ಕೃತಕ ಮಾರುಕಟ್ಟೆ ಸೌಂದರ್ಯದಿಂದ ಪಾರಾಗಬಹುದಾಗಿದೆ.

ಸರಳ ತೀರ್ಮಾನಗಳು ಅಭಿಮಾನಗಳಾಗಿ ಅಧಿಕಾರ ಸೌಂದರ್ಯವಾಗುವ ಕಾರಣದಿಂದ ಭಾವದ ಮರೆಯ ಬ್ರಹ್ಮವಾಗಿರುವ ಚೆನ್ನಮಲ್ಲಿಕಾರ್ಜುನನ ನಿಲುವನ್ನು ಅರಿಯಬಾರದು ಎಂಬ ಎಚ್ಚರವನ್ನು ವ್ಯಕ್ತಪಡಿಸುತ್ತಾಳೆ.

ಅರಿಯಲು ಅಸಾಧ್ಯವಾದ ಹಾಗು ಅರಿತೆನೆಂಬ ಗ್ರಹಿಕೆಗೆ ಅರ್ಥವಾಗದ ಸಂಕೀರ್ಣತೆಗಳ ಕಡೆ ಹೆಚ್ಚು ಚಿಂತಿಸಲು ಸಾಧ್ಯವಾದರೆ ವ್ಯವಸ್ಥೆಯ ಬಂಧನಗಳ ಚಟ ನಿರ್ನಾಮವಾಗಲು ಸಾಧ್ಯ. ಇದು ಅಕ್ಕ ಕಂಡುಕೊಂಡ ಪರಿಣಾಮಕಾರಿಯಾದ ಸೌಂದರ್ಯ ಮೀಮಾಂಸೆ. ಸದಾ ಶೋಧಿಸುವ ಚಲನಶೀಲತೆಯನ್ನು ಅಕ್ಕ ಪ್ರೀತಿಸುತ್ತಾಳೆ. ಆಕಾರಗಳ ಹಿಂದಿರುವ ಆಶಯಗಳು ಪ್ರಧಾನವಾಗದೆ, ಕೇವಲ ಆಕಾರಗಳಿಗೆ ಬಲಿಯಾಗುವ ಚಿಂತನೆಗಳು ಅಸಹಾಯಕರ, ಆಕಾರ ಪ್ರಧಾನ ಭೋಗದ ಬಲತ್ಕಾರವನ್ನು ಸೃಷ್ಟಿಸಿಕೊಳ್ಳಲು ಅಕ್ಕ ಆಯ್ಕೆ ಮಾಡಿಕೊಳ್ಳುವುದು ಆಕಾರಗಳ ಹಿಂದಿನ ಗಹನತೆಯ ಹುಟುಕಾಟವನ್ನು. ಅಕ್ಕ ಪ್ರತಿ ಸಮಸ್ಯೆಗೂ ಆಯ್ಕೆ ಮಾಡಿಕೊಳ್ಳುವ

"ಚೆನ್ನಮಲ್ಲಿಕಾರ್ಜುನ" ಭಾರತೀಯ ಆಕಾರೀ ಭಕ್ತಿಯ ಸಾಂಪ್ರದಾಯಿಕ ಸೌಂದರ್ಯದ ಭಂಜಕತೆಯ ಅತಿದೊಡ್ಡ ಪ್ರತೀ.

ಭಾರತೀಯ ಸಮಾಜದ ಪರಂಪರೆಯಲ್ಲಿ 'ಗುರು' ಕಲ್ಪನೆಗೆ ಅತಿದೊಡ್ಡ ಸ್ಥಾನವಿದೆ. ಅದಕ್ಕೆ ಪ್ರತಿಯಾಗಿ "ಶಿಷ್ಯ" ನೆಲೆಗೆ ಒಂದು ಆಗಾಧತೆಯನ್ನು ಕಲ್ಪಿಸಿಕೊಡುವುದು ಅಕ್ಕನ ವಚನಗಳ ವೈಶಿಷ್ಟ್ಯ. ಕಲಿಯುವ ವ್ಯಕ್ತಿತ್ವ ಅಥವಾ ಕಾಯಕ್ಕೆ ಕೆಲವು ಲಕ್ಷಣಗಳು ಅನಿವಾರ್ಯವಾಗುತ್ತವೆ. ಅಂಥ ಲಕ್ಷಣಗಳನ್ನು ಅಕ್ಕ ಪ್ರತಿಪಾದಿಸಿದ್ದಾಳೆ. ಕಾಯ, ಕರಣ, ಗತಿ, ಮತಿ, ಪ್ರಾಣಗಳು ಸಿದ್ಧ ಸಮಾಜದ ಸಿದ್ಧಾಂತಗಳಿಗೆ ಹಾಗೂ ಬಲತ್ಕಾರಕ ಸೌಂದರ್ಯಗಳಿಗೆ ಅರ್ಪಿತವಾದೊಡನೆ ಕಲಿಕಾತನ ಪತನಗೊಂಡು ಸಿದ್ಧ ಸೌಂದರ್ಯದ ಮಳಿಗೆಯಾಗಿ ಬಿಡುತ್ತದೆ. ಸಮಕಾಲೀನ ಶೈಕ್ಷಣಿಕ ಸಂದರ್ಭವು ಮಳಿಗೆಯಾಗಿ ಬಿಡುತ್ತದೆ. ಸಮಕಾಲೀನ ಶೈಕ್ಷಣಿಕ ಸಂದರ್ಭವು ಇಂಥ ಅಪಾಯವನ್ನು ಎದುರಿಸುತ್ತಿದೆ. ಇಂದ್ರಿಯಗಳ ಇರುವಿಕೆ ಮತ್ತು ಅವುಗಳ ಒಡನಾಟದ ಪ್ರಕ್ರಿಯೆ ಮನವನ್ನು ಆಧರಿಸಿರುತ್ತದೆ. ಮನ ಎಂಬ ಪ್ರಜ್ಞೆ ಸಂಪೂರ್ಣವಾಗಿ ಭೋಗದ ಜಗತ್ತಿನೊಳಗೆ ಐಕ್ಯವಾದರೆ ಅದಕ್ಕೆ ಮರುಹುಟ್ಟು ಇಲ್ಲವಾಗುತ್ತದೆ.

ಭಾರತದ ಸಾಮಾಜಿಕ ಪರಂಪರೆ ನಿರ್ಮಿಸಿಕೊಂಡಿರುವ ದಾಂಪತ್ಯವು ಸ್ತ್ರೀ ಸೆರೆಯಲ್ಲಿ ವಿಜೃಂಭಿಸಲ್ಪಟ್ಟಿದೆ. ತನ್ನ ಹಕ್ಕು ಹಾಗೂ ಪ್ರಾಕೃತಿಕ ಅಭಿವ್ಯಕ್ತಿಗಳಿಗೂ ಪುರುಷ ಅಪ್ಪಣೆಯ ಕಟ್ಟಳೆಗೆ ಮಹಿಳೆ ಒಳಗಾಗಿದ್ದಾಳೆ. ಇಂಥ ಕಟ್ಟಳೆಯಿಂದ ಪಾರಾಗಲು ಸಾಧ್ಯವಾಗದೆ ಅಸಂಖ್ಯಾತ ಹೆಣ್ಣುಗಳ ಅಸ್ತಿತ್ವ ನಾಶವಾಗಿವೆ. ಪುರುಷ ಪ್ರಣೀತ ಜೀವನ ಕ್ರಮಗಳು ಮುಂಚೂಣಿಗೆ ಬಂದ ಸಾಮಾಜಿಕ ರಾಜಕಾರಣದೊಳಗೆ 'ದಿಗಂಬರತೆ'ಯ ಮೂಲಕ ಉಗ್ರ ಪ್ರತಿಭಟನೆಗೆ ಕಾರಣವಾದ ದಿಟ್ಟ ಮಹಿಳೆ ಅಕ್ಕ.

ಅತೃಪ್ತಿಯ ಜೀವನವನ್ನೇ ಒತ್ತಾಯದ ಮೂಲಕ ಬದುಕುವಂತೆ ಮಾಡುವ ಭಾರತೀಯ ಸಾಂಪ್ರದಾಯಿಕ ವಿವಾಹ ಪದ್ಧತಿಯನ್ನು ಅಕ್ಕ ಭಗ್ನಗೊಳಿಸಿದ್ದಾಳೆ. ಕೊರತೆಗಳು ನೀಗಿ ಚಲನಶೀಲತೆಯೊಂದು ಇಲ್ಲಿ ನಿರ್ಮಾಣಗೊಂಡಿದೆ. "ಕಾಲಿಲ್ಲದ ಹೆಂಡತಿ", "ತಲೆಯಿಲ್ಲದ ಗಂಡ" – ಈ ಎರಡೂ ವಿಕಲತೆಗಳು ಸಂಯೋಗಗೊಂಡು ಪರಿಪೂರ್ಣತೆ ಪಡೆಯುವ ಐಕ್ಯತೆಯೇ ದಾಂಪತ್ಯ ಎನ್ನುವುದು ಇಲ್ಲಿ ಚಿತ್ರಿತವಾಗಿರುವ ಅಂಶವಾಗಿದೆ.

ಹೆಣ್ಣೊಬ್ಬಳು ಪರೀಕ್ಷೆಗೊಳಪಡುವ ಕರಾಳ ವ್ಯವಸ್ಥೆಯನ್ನು ಅಕ್ಕ ತೀವ್ರವಾಗಿ ಕೆಣಕಿದ್ದಾಳೆ. ಒಬ್ಬ ಯೌವ್ವನಸ್ಥ ತನಗೆ ಆಪ್ತವಾಗುವಂಥ ಸುಂದರ ಅಂಗಾಂಗಗಳನ್ನು ಕಲ್ಪಿಸಿಕೊಂಡು ಭೋಗಸುಖ ಅನುಭಿಸುವಂತೆ ಅಕ್ಕ ತನಗೆ ಅಗತ್ಯವಾದ ಕಡೆ ಚೆನ್ನಮಲ್ಲಿಕಾರ್ಜುನನ ಜೊತೆ ಅಂಥ ಭಾವಭೋಗದಿಂದ ಹರ್ಷಿತಳಾಗಿದ್ದಾಳೆ. ಅಕ್ಕನ ಬಾಹ್ಯ ರೂಪಕ್ಕೆ ಎರಗುವ ಭೋಗ ದಂಡಗಳನ್ನು ಭಾರತೀಯ ಸಮಾಜದ ಭಾವನಾತ್ಮಕ ಭಾಷೆಯ ಮೂಲಕ ಎದುರಿಸುವಂತಹ ಸೂಕ್ಷ್ಮತೆ ಅಕ್ಕನವರ ವಚನದಲ್ಲಿ ಕಾಣಬಹುದು. ಅವಳ ಸೌಂದರ್ಯ ಪ್ರಜ್ಞೆ ಒಂದು ದಿವ್ಯ ಕ್ರಿಯಾಶೀಲತೆ ಪ್ರಖರ ಸೃಜನಶೀಲತೆ ಒಂದು ಮಹಾನ್ ಸಾಮುದಾಯಿಕ ಚಲನಶೀಲತೆ

ಒಟ್ಟಾರೆಯಾಗಿ, ಅಕ್ಕ ಮೂಲ ಪುರುಷ ದಬ್ಬಾಳಿಕೆ ರೂಪಿಸಿರುವ ಸೌಂದರ್ಯ ರಾಜಕಾರಣವನ್ನು ಸುಡಬಲ್ಲ ಪ್ರತಿಯೋಧವನ್ನು ಕಂಡುಕೊಳ್ಳಬಹುದಾಗಿದೆ.

* * *

ಅಕ್ಕಮಹಾದೇವಿಯ ವಚನಗಳಲ್ಲಿ ಮೇಲುನೋಟಕ್ಕೆ ದ್ವಂದ್ವದ ಹಾಗೆ ಕಾಣಿಸುವ ಹಲವು ಸಂಗತಿಗಳಿವೆ. ಆಕೆಯನ್ನು ಅರ್ಥಮಾಡಿಕೊಳ್ಳುವಲ್ಲಿ ನಾವು ಆಕೆಯ ವಚನಗಳ ಸರಣೀಕರಣದ ರೂಪವನ್ನು ನೋಡಬಹುದು.

ಅಕ್ಕ ಸ್ತ್ರೀತ್ವವನ್ನು ನಿರಾಕರಿಸುತ್ತಲೇ ಸ್ತ್ರೀತ್ವವನ್ನು ಪ್ರೀತಿಸುವ ವ್ಯಕ್ತಿತ್ವ ಆಕೆಯದು. ದೈಹಿಕ ಸ್ತ್ರೀತ್ವವನ್ನಾಕೆ ತುಚ್ಛವಾಗಿ ಕಾಣುತ್ತಾಳೆ. ಆಕೆ ಹೇಳುವಂತೆ "ಅಮೇಧ್ಯದ ಮಡಕೆ, ಮೂತ್ರದ ಕುಡಿಕೆ, ಎಲುವಿನ ತಡಿಕೆ, ಕೀವಿನ ಹಡಿಕೆ"ಯಾಗಿ ಕಾಣಿಸುತ್ತದೆ. ದೇಹ ಪರೀಕ್ಷಿಸಲು ಬಂದವನನ್ನು ವೈರಾಗ್ಯಕ್ಕೆಳಸುವ ಸಂದರ್ಭದಲ್ಲಿ ಹೆಣ್ಣು ದೇಹ "ಮೂತ್ರ ಒಂದು ಒಸರುವ ನಾಳ"ವಷ್ಟೇ ಆಗಿ ಸೀಮಿತವಾಗಿದೆ.

ತಾನು ದೇಹ ಮೋಹ ಬಿಡುವ ಪ್ರಯತ್ನದಲ್ಲಿ ಮುಂದಾದರೂ, ಲೋಕ ನೋಡುವ ದೃಷ್ಟಿಯಲ್ಲಿ ಕಾಮವೇ ಒಡೆದೆದ್ದು ಕಾಣುತ್ತದೆ. ಹೇಸಿಗೆ ದೇಹ, ಅದರ ನಶ್ವರತೆಗಳೊಮದೂ ಅರಿವಾಗದು. ಬೆನ್ನಟ್ಟಿ ಕಾಡುವ ಲೋಕದ ಮುಂದೆ ಅಸಹಾಯಕತೆ, ನೋವು, ವಿಷಾದಗಳು ಮತ್ತೆ – ಮತ್ತೆ ದೇಹದ ವಿಕಾರತೆಯನ್ನು ವಿವರಿಸಬೇಕಾಗುತ್ತದೆ.

ಅಕ್ಕಮಹಾದೇವಿ ಮತ್ತು ಚೆನ್ನಮಲ್ಲಿಕಾರ್ಜುನ ಸಂಬಂಧ ಭಕ್ತಿ ಮೂಲವಾದದ್ದು ; ಅನುಭಾವದ ಆಶಯವನ್ನು ಹೊಂದಿರುವಂಥದ್ದು. ಅಲೌಕಿಕ ಗಂಡನ ನೆಲೆ ತಲುಪಲು ಈ ಲೌಕಿಕ, ಈ ದೇಹ ಸಂಬಂಧಗಳನ್ನು ಹಾದು, ಮೀರಿಯೇ ಹೋಗಬೇಕು. ಎಂಥ ಎತ್ತರದ ಅನುಭಾವದೆಡೆ ದೃಷ್ಟಿ ನೆಟ್ಟಿದ್ದರೂ ಇಲ್ಲಿನ ಸಂಬಂಧಗಳನ್ನು ಸುಲಭವಾಗಿ ಕಳಚಿಕೊಂಡು ಹೋಗಲು ಸಾಧ್ಯವಿಲ್ಲ. ಅದರೂ ಇದನ್ನು ಮೀರಿ ಹೋಗಬೇಕೆಂಬ "ಛಲ" ಅವಳ ಮುಂದೆ ಅನೇಕ ಸವಾಲುಗಳನ್ನು ಒಡ್ಡುತ್ತದೆ. ಪ್ರಾಪಂಚಿಕ ಬದುಕು, ಗ್ರಾಹಸ್ತ್ಯಗಳನ್ನು ನಿರಾಕರಿಸಿಯೇ ಅನುಭಾವ, ಆಧ್ಯಾತ್ಮಗಳನ್ನು ಸಾಧಿಸಬೇಕೆಂಬ ನಿಯಮವೇನೂ ಇಲ್ಲ. ಅನೇಕ ವಚನಕಾರರೂ, ಶಿವಶರಣೆಯರೂ ಲೌಕಿಕ ಬದುಕಿನ ಕ್ರಿಯೆಗಳನ್ನೇ ಶಿವಮುಖಿಯಾಗಿ, ಭಕ್ತಿಯನ್ನಾಗಿ ಪರಿಭಾವಿಸಿ ನಡೆದವರುಂಟು. ವೈಜಕಟ್ಟೆ, ಸೂಳೆ ಸಂಕವ್ವ, ಹೆರೂರ ಹೆಂಗೂಸು ಮುಂತಾದ ಶಿವಭಕ್ತೆಯರು ಲೌಕಿಕದಲ್ಲಿ ಬದುಕುತ್ತಲೇ ಶಿವನನ್ನು ಒಲಿಸಿಕೊಂಡು ಸಾರ್ಥಕರಾದವರು. ಆದರೆ ಅಕ್ಕಮಹಾದೇವಿ ಇವರೆಲ್ಲರಿಗಿಂತ ಭಿನ್ನವಾಗಿ ಲೌಕಿಕವನ್ನು ಬಾಧಕವೆಂಬ ಭಾವಿಸಿ, ಇದನ್ನು ಮೀರಿಯೇ ನಿಲ್ಲಬೇಕೆಂಬ ಮನಃಸ್ಥಿತಿಯಲ್ಲಿ, ದೇಹ – ಮನಸ್ಸು, ಕಾಯ – ಜೀವಲಯದ ನಡುವಿನ ದ್ವಂದ್ವವನ್ನು ನಿವಾರಿಸಿಕೊಳ್ಳುವುದು ಅನಿವಾರ್ಯವಾಗುತ್ತದೆಯಾದರೂ, ನಿವಾರಿಸಿಕೊಳ್ಳುವಲ್ಲಿನ ಹಂತದಲ್ಲಿ ಅನುಭವಿಸುವ ಯಾತನೆ. ಅಸಹಾಯಕತೆಗಳು ಅವಳನ್ನು ಕೆಲವೊಮ್ಮೆ ಅಧೀರಳನ್ನಾಗಿಸುತ್ತದೆ.

ಅಕ್ಕ ಬಾಲ್ಯದಿಂದಲೇ ಭಕ್ತಿ ಮನೋಧರ್ಮವನ್ನು ರೂಢಿಸಿಕೊಂಡು, ಮಧುರಭಾವವನ್ನು ಆಯ್ದುಕೊಂಡು, ತನ್ನ ಕಲ್ಪನೆಯ ಚೆನ್ನಮಲ್ಲಿಕಾರ್ಜುನನನ್ನು ತನ್ನ ಜನ್ಮ – ಜನ್ಮಾಂತರದ ಸಂಗಾತಿಯನ್ನು ಆಗಿ ಒಪ್ಪಿಕೊಂಡು ಬಿಟ್ಟಿದ್ದರಿಂದ, ಲೌಕಿಕ ಪುರುಷನನ್ನು ಮತ್ತೆ ಗಂಡನಾಗಿ

ಸ್ವೀಕರಿಸುವುದು ದ್ವಂದ್ವಕ್ಕೆ ಒಡ್ಡಿಕೊಂಡಂತೆ ಎನಿಸಿದ್ದರಿಂದಲೇ ಕೌಶಿಕನನ್ನು ನಿರಾಕರಿಸಿ ನಿಲ್ಲುವುದು ಅನಿವಾರ್ಯವಾಗುತ್ತದೆ. ಕೌಶಿಕನ ಪ್ರಸಂಗ ಅಕ್ಕಮಹಾದೇವಿಯ ಬದುಕಿನ ಸಂದರ್ಭದಲ್ಲಿ ಬಹುಮುಖ್ಯವೆನಿಸುತ್ತದೆ. ಹರಿಹರ, ಚಾಮರಸ ಮೊದಲಾದ ಕವಿಗಳು ತಮ್ಮ ಕಾವ್ಯದಲ್ಲಿ ಕೌಶಿಕನ ಪ್ರಸಂಗವನ್ನು ಸ್ವಲ್ಪ ವ್ಯತ್ಯಾಸಗಳೊಂದಿಗೆ ಚಿತ್ರಿಸಿದ್ದಾರೆ.

ಹರಿಹರನ ಕಾವ್ಯದಲ್ಲಿ ಅಕ್ಕಮಹಾದೇವಿ ರುದ್ರಕನ್ನಿಕೆ ಕಾರಣಿಕ ಹೆಣ್ಣು. ಕೈಲಾಸದಲ್ಲಿದ್ದವಳು ಕಾರಣಾಂತರದಿಂದ ಭೂಮಿಯಲ್ಲಿ ಹುಟ್ಟುತ್ತಾಳೆ. ಜನ್ಮ ಆರಂಭದಿಂದಲೂ ಅವಳು ಶಿವಭಕ್ತೆ. ಪಾರ್ವತಿಯ ಸಾತ್ವಿಕ ಕಳೆಯ ಇವಳೆಂಬ ಅಭಿಪ್ರಾಯವೂ ಇದೆ. ಅವಳು ಕಾರಣಿ ಹೆಣ್ಣಾಗಿರಲಿ, ಮನುಷ್ಯಳೇ ಆಗಿರಲಿ, ಕೌಶಿಕನೊಂದಿಗೆ ವಿವಾಹವಾದದ್ದನ್ನು ಇಬ್ಬರು ಕವಿಗಳೂ ಚಿತ್ರಿಸಿರುವುದಲ್ಲದೆ, ಅಕ್ಕನ ವಚನಗಳಲ್ಲಿಯೂ ಕೌಶಿಕನೊಂದಿಗಿನ ತನ್ನ ಸಂಬಂಧವನ್ನು ಅದರಿಂದ ತಾನು ಅನುಭವಿಸಿದ ಮಾನಸಿಕ ಯಾತನೆಯನ್ನು ನಿರೂಪಿಸುವಂತಹ ಸಾಲುಗಳ ಮೂಲಕವಾಗಿಯೇ ಮಹಾದೇವಿ ರಾಜವ್ಯವಸ್ಥೆಯನ್ನು, ವಿವಾಹ ವ್ಯವಸ್ಥೆಯನ್ನು ವಿರೋಧಿಸಿ, ಪ್ರತಿಭಟಿಸಿ, ಧಿಕ್ಕರಿಸಿದ್ದನ್ನು ಎಲ್ಲಾ ವಿಮರ್ಶಕರೂ ಗುರುತಿಸಿದ್ದಾರೆ.

ಲಿಂಗ, ಮನ, ಕಾಯ, ಭಾವ ಎಲ್ಲವನ್ನೂ ಅವನಿಗೆ ಅರ್ಪಿಸಿಕೊಂಡು ಬಿಟ್ಟಿದ್ದಾಳೆ. ತನ್ನದಾಗಿ ಏನನ್ನೂ ಉಳಿಸಿಕೊಂಡಿಲ್ಲ. ಕಾಯವೂ ಭೌತಕಾಯದ ಗುಣಧರ್ಮ, ಶಕ್ತಿ, ಸಾಮರ್ಥ್ಯಗಳನ್ನು ಹೊಂದಿಲ್ಲ ; ಉಳಿಸಿಕೊಂಡಿಲ್ಲ. ಪ್ರಾಣದೊಳಗೆ ಪ್ರಾಣ, ವಾಯು ಪ್ರಾಣಗಳು ಸುಟ್ಟು ಹೋಗಿವೆ. ಕಾಯದೊಳಗೆ ಕಾಯವಿಲ್ಲ. ಭಾವದೊಳಗೆ ಭಾವವಿಲ್ಲ. ಈಗವಳ ಕಾಯವೆಲ್ಲ ಲಿಂಗ, ಆದ್ದರಿಂದಲೇ ಅವಳು ಸರ್ವಾಂಗ ಲಿಂಗಿ, ಹೆಂಡತಿಯ ಅಕಾಯ ಸಂಚರಿಸಿ ಸರ್ವೇಂದ್ರಿಯಾನುಭೂತಿಯನ್ನು ಅನುಭವಿಸುತ್ತಾನೆ. ಭೋಗಿಸುತ್ತಾನೆ. ಲೌಕಿಕದ ಗಂಡ ಹೆಂಡಿರ ಕೂಟ ಅತ್ಯಲ್ಪಕಾಲದ್ದು. ಜೊತೆಗೆ ಆ 'ಕೂಟ' ದೇಹಕ್ಕಷ್ಟೇ ಸೀಮಿತ, ಮನ ಭೋಗವಿಲ್ಲ ; ಭಾವ ಭೋಗವಿಲ್ಲ ; ನೇತ್ರ ಭೋಗವಿಲ್ಲ ; ನಾಸಿಕ ಭೋಗವಿಲ್ಲ ; ನಾಲಿಗೆ ಭೋಗವಿಲ್ಲ ಆದರೆ ಸರ್ವಾಂಗದಲ್ಲಿ ಒಳಸೇರಿಕೊಂಡ ಲಿಂಗಪತಿ ಶರಣಸತಿಯನ್ನು ಸರ್ವಾಂಗವನ್ನು, ಅಭಿನ್ನ ಭಾವದೊಂದಿಗೆ, ಏಕಾರ್ಥದೊಂದಿಗೆ ನಿತ್ಯ ನಿರಂತರವಾಗಿ ಭೋಗಿಸುತ್ತಾನೆ. ಇದು ಶರಣಸತಿ ಲಿಂಗಪತಿಯ ಸಾಮರಸ್ಯದ ನಿಲವು, ಸಾಕಾರ ನಿರಾಕಾರಗಳು ಒಂದಾಗುವುದಾದರೂ ಹೇಗೆ ? ಸಾಕಾರ ನಿರಾಕಾರ, ಸಾಂಗ – ನಿರಂಗ, ಅವಯವ ನಿರ್ಯವಯವ ದ್ವಂದ್ವಗಳಾಗಿ ಕಾಣುವ ಇವುಗಳ ಸಂಬಂಧವಾದರೂ ಏನು ? ಎನ್ನುವ ಸಂದೇಹದ ಪ್ರಶ್ನೆಗೆ ತನ್ನ ಮತ್ತು ನಿರಾಕಾರ ಪ್ರಿಯರ ನಿಜ ಸಂಬಂಧವನ್ನು ವಿವರಿಸಲು ನೀಡುವ ಪ್ರತಿಮೆಗಳು 'ಸತಿ – ಪತಿ' ಗಾಢ ಸಂಬಂಧ ಕೇವಲ ಸಂಬಂಧವಲ್ಲ. ಬೇರ್ಪಡಿಸಲಾಗದ ಒಂದನ್ನು ಬಿಟ್ಟು ಮತ್ತೊಂದಕ್ಕೆ ಅಸ್ತಿತ್ವವಿಲ್ಲದ ರೀತಿಯ ಸಂಬಂಧವನ್ನು ಅನುಭಾವದ ಪರಾಕಾಷ್ಠೆಯ ಸ್ಥಿತಿಯಲ್ಲಿ ಹೇಳುತ್ತದೆ.

ಅಕ್ಕಮಹಾದೇವಿ ಲೌಕಿಕದ ಪುರುಷರಲ್ಲಿ ಕಾಣದ ವಿಚಿತ್ರ ವಿಭಿನ್ನ ಅಮೂರ್ತ ಸ್ವರೂಪದ ಚೆನ್ನಮಲ್ಲಿಕಾರ್ಜುನನಿಗೆ ಒಲಿದವಳು. ಸಮಾಜ, ಪ್ರಪಂಚ ನಿರೀಕ್ಷಿಸುವ, ಹೇರುವ

ಮರ್ಯಾದೆಯ ಅಂಸಗಳು ಎಲ್ಲವನ್ನೂ ಅನಿವಾರ್ಯವೆಂಬಂತೆ ನಿವಾರಿಸಿಕೊಂಡಿದ್ದಾಳೆ. ಅವಳಿಗೆ ದೇಹ, ಮನಸ್ಸು, ಶೀಲಗಳ ಹಂಗಿಲ್ಲ, ಲೌಕಿಕದ ಬದುಕಿನ ಯಾವ ಹೊರೆಯೂ ಇಲ್ಲ. ಇಂಥ ನಿಲುವನ್ನು ನೆಲೆಯನ್ನು ತಲುಪುವುದು ಅಕ್ಕಮಹಾದೇವಿಗೆ ಸುಲಭದ ಮಾತಲ್ಲ. ಕಾಯಗೊಂಡು ಎಲ್ಲರಂತೆ ಹುಟ್ಟಿ, ವಿಷಯೇಂದ್ರಿಯಗಳನ್ನು ಒಳಗೊಂಡು, ಕುಟುಂಬ, ಸಮಾಜ, ಪ್ರಪಂಚ ನಿರೀಕ್ಷಿಸುವ ಉಪೇಕ್ಷಿಸುವ ರೀತಿಯಲ್ಲಿ, ಸಂಬಂಧಗಳ ನಿರ್ವಹಣೆಯಲ್ಲಿ ಅದರಲ್ಲಿಯೂ ಹೆಣ್ಣಾದವಳು ಪುರುಷನ ಅಂಕೆಯಲ್ಲಿ ವಿನಯ ವಿಧೇಯತೆಗಳಿಂದ, ಸಾಂಪ್ರದಾಯಿಕ ಸಮಾಜ ವಿಧಿಸುವ ನೀತಿ – ನಿಯಮಗಳ ಬಿಕ್ಕಟ್ಟಿನೊಳಗೇ ನಡೆದುಕೊಳ್ಳಬೇಕೆಂಬ ಶಾಸನಕ್ಕೆ ಅಧೀನವಾಗಿ ಬಾಳಬೇಕಾಗಿದ್ದ ಪರಿಸರದಲ್ಲಿ ಬಾಳಬೇಕಾಗಿ ಬಂದ ಅನಿವಾರ್ಯತೆಯೊಂಗಿದ್ದವಳು.

ಸಾಮಾನ್ಯ ಹೆಣ್ಣು ಮಕ್ಕಳು ಪರಿಸ್ಥಿತಿಯೊಂದಿಗೆ, ಕಾಲದ ಕಟ್ಟು ಕಟ್ಟಳೆಗೆ ತಲೆಬಾಗಿ ರಾಜಿ ಮಾಡಿಕೊಂಡು ಬದುಕುವ ಸಾಧ್ಯತೆಯಿತ್ತಾದರೂ, ಹುಟ್ಟಿನಿಂದಲೇ ಸ್ವತಂತ್ರ ಮನೋವೃತ್ತಿಯ ಅಕ್ಕಮಹಾದೇವಿಗೆ ಮಲ್ಲಿಕಾರ್ಜುನನ ಮೋಹಕ ಚೆಲುವಿಗೆ ಒಲಿದವಳಿಗೆ ಅವನ ಅನನ್ಯ ಪ್ರೇಮದ ಮತ್ತು ಶಾಶ್ವತ ಕೂಟಕ್ಕೆ ತುಡಿದವಳಿಗೆ, ಲೌಕಿಕದ ನಿರ್ಬಂಧಗಳು ಅಸಹನೀಯವೆನಿಸಿತು. ಪ್ರಪಂಚ, ಪ್ರಪಂಚದಲ್ಲಿನ ಪುರುಷ ಸಮಾಜದ ದೃಷ್ಟಿ, ಆತ್ಮ ಚೈತನ್ಯಕ್ಕೆ ಮಾರಕವಾಗಬಹುದಾದ ಹಲವು ಬಗೆಯ ಸಂಬಂಧಗಳ ಮೂಲದಲ್ಲಿ ಕ್ರೌರ್ಯ, ಹಿಂಸೆ, ಮನುಷ್ಯರನ್ನು ಕಾಡುವ ಆಸೆ, ಆಮಿಷಗಳು, ವಿಷಯೇಂದ್ರಿಯಗಳು, ಅರಿಷಡ್ವರ್ಗಗಳು ಕಾಯ ವಿಕಾರಗಳು – ಎಲ್ಲವೂ ತನ್ನ ಆಧ್ಯಾತ್ಮ ಸಾಧನೆಗೆ, ಅನುಭಾವಿಕ ಚಿಂತನೆಗೆ ಅಡಚಣೆಗಳಾಗಬಲ್ಲವೆಂಬ ಆತಂಕ, ಭಯ, ತಲ್ಲಣ ಇವುಗಳಿಂದ ಬಿಡಿಸಿಕೊಳ್ಳಲು ನಡೆಸುವ ಹೆಣಗಾಟ ಹುಟ್ಟು ಅನುಭಾವಿಯಾದವರಿಗೆ ಸಹಜವಾಗಿ ಕಾಡುವ ಸಂಘರ್ಷಗಳು, ದ್ವಂದ್ವಗಳು ಅವುಗಳಿಗೂ ಸವಾಲುಗಳಾಗುತ್ತವೆ. ಆಧಾತ್ಮ ಮಾರ್ಗ, ಭಕ್ತಿಮಾರ್ಗವೊಂದೇ ಎಲ್ಲಾ ಲೌಕಿಕತೆಯ ವಿಕಾರಗಳಿಗೆ ಪರಿಹಾರ. ಆದರೆ ಆ ಹಾದಿಯನ್ನು ಕ್ರಮಿಸುವುದಕ್ಕೆ ಎದುರಾಗುವ ಸಂಘರ್ಷಗಳಿಂದ ಪಾರಾಗುವುದಕ್ಕೆ ದ್ವಂದ್ವಂಗಳನ್ನು ಮೀರಿ ನಿಲ್ಲುವುದಕ್ಕೆ ದಿಟ್ಟತನದ ಅಗತ್ಯವಿದೆ.

ಅನುಭಾವಿ ಸಾಧಕ ಹಾದಿಯ ಮುಳ್ಳುಗಳ ಮೇಲೆ ಹೆಜ್ಜೆಯಿಟ್ಟು ನಡೆದಾಗ ಅನುಭವಿಸುವ ನೋವು ಯಾತನೆಗಳು, ಅಕ್ಕಮಹಾದೇವಿಯೇ ಅನುಭವಿಸಿದಳು. ಕೌಶಿಕನೊಂದಿಗೆ ಬಲವಂತದ ಮದುವೆಯೊಂದಿಗೆ, ಹೆಣ್ಣು, ದೇಹ, ಕಾಮ, ಕಾಯಗಳ ಬಗ್ಗೆ ಲೌಕಿಕ ಅನುಭಾವಿಕ ನೆಲೆಗಳಲ್ಲಿ ಸಾಧ್ಯವಾಗಿಸಿಕೊಳ್ಳುವ ಪ್ರಯತ್ನದಲ್ಲಿ ಲೌಕಿಕವನ್ನು ಎಲ್ಲಾ ನೆಲೆಗಳನ್ನು ಧಿಕ್ಕರಿಸುತ್ತಾಳೆ, ನಿರಾಕರಿಸುತ್ತಾಳೆ. ನಿರಾಕರಣೆಯ ಮೂಲಕ ಸಮಾಜ, ಸಮಾಜ ವ್ಯವಸ್ಥೆಯನ್ನು ಪ್ರತಿಭಟಿಸುತ್ತಾಳೆ. ಆತ್ಮವಿಶ್ವಾಸ ಭರವಸೆಗಳೊಂದಿಗೆ, ತಂದೆ – ತಾಯಿ, ಗಂಡ ಇತ್ಯಾದಿ ಸಂಬಂಧಗಳನ್ನು ಕಿತ್ತೊಗೆದು ಹೊರಡುತ್ತಾಳೆ. ಅಕ್ಕನ ಸಾಧನೆಯೂ ಒಂದು ಹೋರಾಟವೇ, ಹೋರಾಟಕ್ಕೆ ಇಳಿದ ಮೇಲೆ ಹಿಂತಿರುಗಿ ನೋಡುವ ಪ್ರಶ್ನೆಯೇ ಇಲ್ಲ. ಆಕೆ ಯೋಧನಂತೆ ಅಣಿಗೊಂಡು ಹೊರಟಂತೆ ತನ್ನನ್ನು ಚಿತ್ರಿಸಿಕೊಳ್ಳುವುದರ ಮೂಲಕ ಆತ್ಮವಿಶ್ವಾಸವನ್ನು ಮೆರೆದಿದ್ದಾಳೆ.

ಪ್ರಪಂಚದಲ್ಲಿ ಕಾಡುವ ಅಂಶಗಳು ಹಲವಾರಿವೆ. ಜೊತೆಗೆ ಕಾಯ, ಇಂದ್ರಿಯಗಳೂ ಕೂಡಾ ಜೀವವನ್ನು ಅಧೀರಗೊಳಿಸುತ್ತವೆ. ಅವುಗಳಿಂದ ದೂರವಾಗಬೇಕೆಂದು ಕೊಂಡಷ್ಟೆ ಅವು ಬೆನ್ನಟ್ಟಿ ಬರುತ್ತವೆ. ಸಂಸಾರದ ವಿಷಮತೆ, ನಶ್ವರತೆಗಳನ್ನು ವಿವರಿಸುವ ಅಕ್ಕನ ವಚನಗಳು, ಸಂಸಾರದ ಬಗೆಗಿನ ಅವಳ ನಿಲುವನ್ನು ಸಂಸಾರದಲ್ಲಿ ಸಿಲುಕಿ ಹೆಣಗಾಡುತ್ತಿರುವ ಮನಃಸ್ಥಿತಿಯನ್ನು ಅಲ್ಲಿಂದ ಬಿಡಿಸಿಕೊಳ್ಳುವಲ್ಲಿನ ತನ್ನ ಅಸಹಾಯಕತೆಯನ್ನು ತಿಳಿಸುತ್ತದೆ.

ಒಂದು ಸ್ಥಿತಿಯನ್ನು ದಾಟಿ ಮತ್ತೊಂದು ಸ್ಥಿತಿ ಮುಟ್ಟಿದಾಗ, ಪೂರ್ವ ಸ್ಥಿತಿ ನಾಶವಾದಂತೆಯೇ 'ಬೆರೆಸಿದೆನು' ಎಂದು ಮಾತಿನಲ್ಲಿ ಹೇಳುವುದಾದರೆ ಶಬ್ದದ ಅಭಿವ್ಯಕ್ತಿಯನ್ನು ನೀಡುವುದಾದರೆ, ಬೆರೆಸಿರುವುದೇ ಸತ್ಯವಗದು. ಆದ್ದರಿಂದ ಶಬ್ದ ಮುಗ್ಧತೆಯನ್ನು ನಿರೀಕ್ಷಿಸಿದ" ಕವಯತ್ರಿಯರಿಗೆ ಅಕ್ಕಮಹಾದೇವಿಯ ಬೆರೆಸುವಿಕೆಯ ಅನುಭವಕ್ಕೆ ಸಮರ್ಥನೆ ಸಿಗದು.

ಮೊದಲಿನಿಂದಲೂ ಅಕ್ಕಮಹಾದೇವಿಯ ಬದುಕು ಎರಡು ನೆಲೆಗಳಿಂದ ಕೂಡಿದ್ದು, ಒಂದು ನಿರಾಕರಣ ಯೋಗ್ಯವಾದ ವಾಸ್ತವಿಕ ಪ್ರಪಂಚ ಮತ್ತು ಅಪೇಕ್ಷಿಕ ಆಧ್ಯಾತ್ಮ ಪ್ರಪಂಚ ಈ ಎರಡೂ ನೆಲಗಳ ದ್ವಂದ್ವಂದ ಮೂಲಕ ಸಾಗಿ ಬರುವಲ್ಲಿ ಅನುಭವಿಸಿದ ಮಾನಸಿಕ ತೊಳಲಾಟ, ಯಾತನೆ, ಹಿಂಸೆ ಸಾಮಾನ್ಯವಾದದ್ದಾಗಿರಲಿಲ್ಲ. ಸಮಾಜ ವ್ಯವಸ್ಥೆ ಸಾಂಪ್ರದಾಯಿಕ ನಂಬಿಕೆಗಳು, ರೂಢಿಗತ ಮೌಲ್ಯಗಳು, ಹೆಣ್ಣಿನ ಪರವಾದ ನಿಲುವುಳು ಎಲ್ಲವನ್ನೂ ಧಿಕ್ಕರಿಸುವುದು. ನಿರಾಕರಿಸುವುದು ಆಧ್ಯಾತ್ಮಿಕ ಆಶಯಗಳನ್ನು ಪೂರೈಸಿಕೊಳ್ಳಲು, ಅನಿವಾರ್ಯವಾಯಿತು ಆಧ್ಯಾತ್ಮ, ಅನುಭಾವ, ಮೋಕ್ಷಗಳಿಗೆ ಹೆಣ್ಣು ಅನರ್ಹಳೆಂಬ ಭಾವನೆಯು ಪ್ರಚಲಿತವಾಗಿದ್ದ ಸಮಯದಲ್ಲಿ ಅಕ್ಕ ಆಧ್ಯಾತ್ಮವನ್ನೇ ತನ್ನ ಬದುಕಿನ ಪರಮಗುರಿಯಾಗಿಸಿಕೊಂಡಳು. ಅಲೌಖಿಕ ಅಥವಾ ಪಾರಮಾರ್ಥಿಕ ಗಂಡನನ್ನೇ ತನ್ನ ಸಾಂಗತ್ಯಕ್ಕೆ, ದಾಂಪತ್ಯಕ್ಕೆ ಆರಿಸಿಕೊಳ್ಳುವುದರ ಮೂಲಕ ಲೌಕಿಕ ವ್ಯವಸ್ಥೆಯಲ್ಲಿನ ವಿವಾಹ ವ್ಯವಸ್ಥೆಯನ್ನು ಧಿಕ್ಕರಿಸಿದಳು. ಇದಕ್ಕಾಗಿ ಅವಳಿಗೆ ಎದುರಾದ ಪ್ರತಿಕ್ರಿಯೆ, ಕಟಕಿ, ವ್ಯಂಗ್ಯ, ನಿಂದೆ, ಅವಮಾನಗಳನ್ನು ಎದುರಿಸಬೇಕಾಗಿ ಬಂದುದು ಸ್ವಾಭಾವಿಕವೇ ಆಗಿತ್ತು. ದಿಟ್ಟ ಮನಸ್ಸಿನ ಛಲವಾದಿಯಾದ ಹೆಣ್ಣು ಅಕ್ಕಮಹಾದೇವಿ, ನಂಜೆಲ್ಲವನ್ನೂ ನುಂಗಿಕೊಂಡು ಮುಂದುವರೆದಳು. 'ನಾಮದಲಿ ಹೆಂಗೂಸಾದರೇನು ಭಾವಿಸಲು ಗಂಡು ರೂಪು" ಎನ್ನುವುದನ್ನು ಸಾರ್ಥಕ ಪಡಿಸಿಕೊಂಡಳು ಸಮಾಜ, ಪ್ರಪಂಚದ ಬಗ್ಗೆ ತನ್ನ ಮನೋಗತ ಭಾವನೆಗಳನ್ನು ತನ್ನ ವಚನಗಳಲ್ಲಿ ತೋಡಿಕೊಂಡಳು. ಪ್ರಪಂಚವನ್ನು ದೃಷ್ಟಿಯಲ್ಲಿಟ್ಟುಕೊಂಡು ಲೌಕಿಕ ಕ್ರಿಯೆ, ಲೌಕಿಕ ನೆಲೆಯ ಎಲ್ಲಾ ಅವಸ್ಥೆಗಳನ್ನು ಗಂಡು ಹೆಣ್ಣಿನ ಸಂಬಂಧಗಳ ಸ್ವರೂಪವನ್ನು ವಿವರಿಸಿದಂತೆ ಕಂಡರೂ ಅವುಗಳಿಗೆ ಆಧ್ಯಾತ್ಮಿಕ, ಅನುಬಾವಿಕ ನಿರ್ದೇಶನವೂ ಇದೆಯೆಂಬುದು ಸೂಕ್ಷ್ಮವಾದ ಅವಲೋಕನದಿಂದ ಸ್ಪಷ್ಟವಾಗುತ್ತದೆ. ಲೋಕದ ದೃಷ್ಟಿಯಲ್ಲಿ ಅವಳ ನಡೆ – ನುಡಿ ಅವಲೋಕನದಿಂದ ಸ್ಪಷ್ಟವಾಗುತ್ತದೆ. ಲೋಕದ ದೃಷ್ಟಿಯಲ್ಲಿ ಅವಳ ನಡೆ, ನುಡಿ ನಿಲುವುಗಳು ವಿಚಿತ್ರವೂ, ಹುಚ್ಚುತನದ ಪರಮಾವಧಿಯಂತೆ ತೋರುವುದು ಸಹಜ. ಲೋಕ ನಿಂದೆಗಳು, ನಿಷ್ಠುರ ಅವಮಾನ ಎಲ್ಲವನ್ನೂ ಸಹಿಸಿಕೊಂಡು ತನ್ನ ಆಧ್ಯಾತ್ಮಿಕ ಆಶಯಗಳನ್ನು

ಸಾಕ್ಷಾತ್ಕಾರಗೊಳಿಸಿಕೊಳ್ಳುವುದು ಅನಿವಾರ್ಯವೆಂಬ ಅರಿವಿದೆ "ಲೋಕವೆಂಬ ಮಾಯೆಗೆ ಶರಣ ಚಾರಿತ್ರ್ಯ ಮರುಳಾಗಿ ತೋರುವುದು" ಸಹಜವೆಂದು ಕೊಂಡು ಸುಮ್ಮನಾಗುತ್ತಾಳೆ. ತನ್ನ ನಿಲುವಿಗೆ ಸಮಾಜ ಬಹಿಷ್ಕಾರವೂ ಭಾದ್ಯ. ಆದರೆ ಕಾಯಗೊಂಡು ಲೋಕದಲ್ಲಿ ಹುಟ್ಟಿದ ಮೇಲೆ ಹಸಿವು, ತೃಷೆಗಳ ಬಾಧೆಯನ್ನು ಮೀರಿ ನಿಲ್ಲಲು ಸಾಧ್ಯವಿಲ್ಲ. ಅದಕ್ಕಾಗಿ ಪ್ರಪಂಚ ಮೊಗ ತಿರುಹಿದರೆ ಸ್ವಪ್ರಯತ್ನಗಳಿಂದ ಕಾಯಜೀವಗಳನ್ನು ಪೋಷಿಸಿಕೊಳ್ಳಬೇಕು. ಪ್ರಪಂಚವೇ ವಿರೋಧಿಯಾಗಿ ಒಂಟಿಯಾಗಿ ಬದುಕುವುದೂ ತನಗೆ ದುಸ್ತರವಾಗದು. ತಾನೊಲಿದ ಚೆನ್ನಮಲ್ಲಿಕಾರ್ಜುನನೇ ಆತ್ಮದೊಂದಿಗಿದ್ದಾನೆ. ಎಂಬ ನಂಬಿಕೆಯಿದೆ ಪ್ರಪಂಚದಲ್ಲಿ ಹುಟ್ಟಿದ ಮೇಲೆ ಅದು ಆಧ್ಯಾತ್ಮ ಮುಖಿಯಾದ ಜೀವಕ್ಕೆ ಅದೂ ಹೆಣ್ಣು ಜೀವಕ್ಕೆ ಏನೆಲ್ಲಾ ಅಡ್ಡಿ ಆತಂಕಗಳನ್ನು ಅವಮಾನವನ್ನು ಮುಂದೊಡ್ಡುವುದು. ಅದಕ್ಕೆ ಅಕ್ಕ ಹೇಳುವಂತೆ ನಿರ್ಲಿಪ್ತ ಮನೋಭಾವಗಳು, ಸಮಾಧಾನಗಳೇ ಪರಿಹಾರ.

ಧರಣೀದೇವಿ ಮಾಲಗತ್ತಿಯವರ ಪ್ರಕಾರ ಅಕ್ಕ ಎಲ್ಲಾ ವಚನಕಾರರಿಗಿಂತ, ಹೆಣ್ಣುಗಳಿಗಿಂತ ವಿಭಿನ್ನ, ತಾನು ಬೆಂಬತ್ತಿ ಕೈಹಿಡಿದರೂ ಮಿಕ್ಕು ಮೀರಿ ಹೋದ 'ಪತಿ'ಯನ್ನು ಹಿಂಬಾಲಿಸುತ್ತಾ, ಹುಡುಕುತ್ತಾ ಶ್ರೀಶೈಲದ ತನಕವೂ ಸಾಗುವ ಈಕೆಯದು ದ್ವಿದಾಭಾವ. ಚಿನ್ನದೊಳಗೂ ಬಣ್ಣದಂತೆ ತನ್ನೊಳಗಿರ್ದ ಚೆನ್ನಮಲ್ಲಿಕಾರ್ಜುನ ಕರಸ್ಥಳದಲ್ಲೇ ಸಿಲುಕಿ 'ನಾ' 'ನೀ' ಎಂಬ ಭ್ರಾಂತಿ ಯಾಕೆ ? ಎನಿಸಿದರೂ ಅವಳ ಉತ್ಕಟ ಪ್ರೇಮ ರೂಪದ ಭಕ್ತಿಗೆ 'ನೀ' 'ನಾ' ಎನ್ನುವ ಸಂಬೋಧನೆ ಬೇಕೇ ಬೇಕು. ಅಂಥ ವಚನಗಳೇ ಕಾವ್ಯಾತ್ಮಕವಾಗಿಯೂ, ಭಾವಾತ್ಮಕವಾಗಿಯೂ ವಿಶಿಷ್ಟ ಅನಿಸಿಕೊಂಡವಳು. ಒಂದು ಸಲ ತನ್ನೊಳಗೇ ಇರುವವನೊಡನೆ ಸಂವಾದಿಸುವ ಹಾಗೆ, ಇನ್ನೊಂದು ಸಲ ತನ್ನಿಂದ ಪ್ರತ್ಯೇಕವಾಗಿರುವವನ ಜೊತೆ ಸಂವಾದಿಸುವಂತೆ, ಒಮ್ಮೆ ದ್ವೈತಕ್ಕೂ, ಒಮ್ಮೆ ಅದ್ವೈತಕ್ಕೂ ನಿಲುವನ್ನು ಬದಲಾಯಿಸಿಕೊಳ್ಳುತ್ತಾಳೆ.

'ಕಾಯ ಕರ್ರನೆ ಕಂದಿದಡೇನು ? ಕಾಯ ಮಿರ್ರನೆ ಮಿಂಚಿದಡೇನು ?' ಎನ್ನುವ ನಿರಾಸಕ್ತಿ ದೇಹದ ಬಗೆಗೆ ಇದ್ದಾಗಲೂ ಆಕೆಗೆ ಆಧ್ಯಾತ್ಮಿಕ ಬದುಕಿನ ಆರಂಭದ ಘಟ್ಟದಲ್ಲಿ ದೇಹದ ವ್ಯಾಪಾರಗಳೇ ಬೇರೆ, ಆತ್ಮದ ವ್ಯಾಪಾರಗಳೇ ಬೇರೆ. ಎನ್ನುವಷ್ಟು ದ್ವೈತ ಪ್ರೀತಿಯಿಲ್ಲ. ಆತ್ಮದ ವ್ಯಾಪಾರಕ್ಕೆ ಬೇಕಾದ ಪ್ರತಿಭಟನೆಗೆ ದೇಹವೇ ವಿಧಾನವಾಗುತ್ತದೆ. ಅಸಹಾಯಕತೆಯ ಆಧ್ಯಂತಿಕ ನೆಲೆಯ ಪ್ರತಿಭಟನೆಯಾಗಿ ಇತ್ತೀಚೆಗೆ ಮಣಿಪುರದ ಕೆಲವು ಮಹಿಳೆಯರು, ಭಾರತೀಯ ಸೈನಿಕರು ಮಹಿಳೆಯರ ಮೇಲೆ ಮಾಡುವ ಹಿಂಸೆಯನ್ನು ವಿರೋಧಿಸಲು ನಗ್ನತೆಯನ್ನು ಉಪಯೋಗಿಸಿದರೂ, ಬಹುಶಃ ಅಕ್ಕನೂ ಕೌಶಿಕನ ಒಲ್ಲದ ಒತ್ತಾಯದಿಂದ ಅತಿಯಾಗಿ ಬೇಸತ್ತ ಗಳಿಗೆಯಲ್ಲಿ ನಿರಾಕರಣೆಯ ಅನ್ಯಮಾರ್ಗವಿಲ್ಲದೆ ಈ ರೀತಿಯನ್ನು ಆಯ್ದು ಕೊಂಡಿರಬೇಕು.

ಆದರೆ ನಂತರದಲ್ಲಿ ದೇಹದ ಮೇಲಿನ ವಾಂಛೆಯನ್ನು ತಾನೂ ಕಳೆದುಕೊಳ್ಳುವುದು ಆಕೆಗೆ ಸಾಧ್ಯವಾಯಿತೆನಿಸುತ್ತದೆ. ಗಂಡಿನ ಆಶ್ರಯವಿಲ್ಲದೆ ಹೆಣ್ಣು ಬದುಕುವುದು ಸಮಾಜಕ್ಕೆ ಒಪ್ಪಿತವಾದ ಸಂಗತಿಯಾಗಿರಲಿಲ್ಲ. "ಪುರುಷನ ಒಲವಿಲ್ಲದ ಲಲನೆ"ಯು ನಿಷ್ಪ್ರಯೋಜಕ ಸ್ಥಿತಿಯೆ

ಪ್ರತಿಮೆಯಾಗಿ ಶರಣರಿಗೂ ಕಾಣಿಸಿದ್ದಾಳೆ. ದಾಸಿಮಯ್ಯನಿಗಂತೂ ಮಧ್ಯಾಹ್ನದ ಬಿಸಿಲಿನಲ್ಲಿ 'ದಾರ ಹರಿದಿದೆ ದೀಪತಾ' ಎಂದರೆ ಪತ್ನಿ ತರುತ್ತಿದ್ದಳಂತೆ. ಮೊನ್ನೆ ಮಾಡಿದ ಅಂಬಲಿ ಮಾಡುತ್ತಿದೆ ಎಂದರೆ ದೂರದಿಂದ ಬೀಸಿದಳಂತೆ. ಇಂತಹ ಹೆಣ್ಣು ಸಿಕ್ಕರೆ ಸಂಸಾರವೇ ಲೇಸು ಎನ್ನುತ್ತಾನೆ. ಇಂತಹ ಸಜ್ಜನ ಸತಿಯೆ ಕಲ್ಪನೆ ಶರಣರಲ್ಲೇ ಇತ್ತೆಂದರೆ, ಇನ್ನು ಸಾಮಾನ್ಯರ ಅಭಿಪ್ರಾಯವೇನು? ಇಂಥದ್ದರಲ್ಲಿ ಚೆನ್ನಮಲ್ಲಿಕಾರ್ಜುನನೇ ನನ್ನ ಗಂಡ ಎಂದು ಘೋಷಿಸುವುದು ಅವಳ ಸಾಮಾಜಿಕ ಅನಿವಾರ್ಯತೆಯೂ ಆಗಿತ್ತು. ಗಂಡನಿಲ್ಲದೆ ಗಂಡನನ್ನು ಧಿಕ್ಕರಿಸಿ ಬಂದು ಬದುಕಿದ ರೀತಿಯನ್ನು ಸಮಾಜದ ಕಣ್ಣಿಗಲೆ ಸಹ್ಯವಾಗಿಸಿದ್ದು, ಅದೆ ಹಲವು ಸಲ ಹೆಣ್ಣುತನದಿಂದ ಹೊರಗೆ ನಿಂತು ಅಕ್ಕ ನುಡಿಯುತ್ತಾಳೆ. ಆದರೆ ಆಕೆ ಅಲ್ಲಿ ಪ್ರದರ್ಶಿಸುವುದು 'ಅಂಗರಹಿತ' ಪ್ರಜ್ಞೆಯನ್ನಲ್ಲ ತಾನು ಹೆಣ್ಣಲ್ಲ ಎನ್ನುವುದನ್ನು ಪ್ರಜ್ಞಾವಲಯದಲ್ಲಿ ಇಟ್ಟುಕೊಳ್ಳುವುದಕ್ಕಿಂತ ಹೆಚ್ಚಾಗಿ ತಾನು ಹೆಣ್ಣು ತನದಿಂದ ಹೊರಗಿರುವವಳು ಎನ್ನುವುದು ಅವಳಿಗೆ ಮುಖ್ಯವಾಗುತ್ತದೆ. ಆದ್ದರಿಂದ ಅಕ್ಕನದು ಅಂಗಾತೀತ ಪ್ರಜ್ಞೆ ಅವಳ ವಿಚಾರಗಳ 'ಕೇಂದ್ರ' ನೆಲೆಯಲ್ಲಿ ನಿಲ್ಲುತ್ತದೆ. ಆದರೆ ಭಾವುಕನಾಗಿ ನುಡಿಯುವಾಗ ಸಾಮಾನ್ಯಳಿಗಿಂತ ಸಾಮಾನ್ಯಳಾಗುತ್ತಾಳೆ. ಅಬಲೆಯಾಗುತ್ತಾಳೆ. ಆಕೆಯ ಭಕ್ತಿಯ ಪರಾಕಾಷ್ಟೆ ವ್ಯಕ್ತವಾಗುವುದು ಅವಳ ಅಖಿಲತೆಯ ಭಾವದಲ್ಲಿ ಮತ್ತು ಅಪ್ಪಟ ಸ್ತ್ರೀತ್ವ ಎಂದು ಸಮಾಜ ಗುರುತಿಸುವ ರೀತಿಯಲ್ಲೆ ಲೋಕದ ಗಂಡಸರ ಬಗ್ಗೆ ಅತೀವ ದ್ವೇಷ. ಮಲ್ಲಿಕಾರ್ಜುನನೆಂಬ ಗುರುವಿನ ಬಗ್ಗೆ ಅತೀವ ಮೋಹ. ಚೆನ್ನಮಲ್ಲಿಕಾರ್ಜುನನಲ್ಲದ ಗಂಡರಿಗೆ 'ಉರದಲ್ಲಿ ಮುಳ್ಳುಂಟೆಂಬ' ಭಾವನೆ ಅವಳದು.

ಅಕ್ಕ ಹೇಳುವಂತೆ ದ್ವಂದ್ವವನ್ನು ನಾವು ಮೇಲು ನೋಟದಲ್ಲೇ ಕಾಣಬಹುದು. ಅಕ್ಕ ಒಂದು ಕಡೆ ಒಂದು ರೀತಿಯಲ್ಲಿ ದಿಟದ ನಾಗನನ್ನು ಕಂಡರೆ ಹೊಡೆಯ ಬಯಸುವ ಮತ್ತು ಕಲ್ಲುನಾಗನಿಗೆ ಹಾಲು ಕುಡಿ ಎಂದು ಗೋಗರೆಯುವ ರೂಪದಲ್ಲಿ ಭಾವಾನುಬಂಧವನ್ನು ಆಕೆ ಪುರುಷರ ಬಗೆಗೆ ಪ್ರದರ್ಶಿಸುತ್ತಾಳೆ. ಬಯಕೆಗಳನ್ನು ಭಾವನೆ ಮತ್ತು ಪದಗಳ ಮೂಲಕ ವಿರೇಚಿಸುತ್ತಾಳೆ. ಅವಳ ಉತ್ಕಟ ಪ್ರೇಮದ ವಚನಗಳೂ ಇಂಥವೆ ಕುಟುಂಬ ಪ್ರೀತಿಯುಳ್ಳ ಆಕೆಯನ್ನು ಕೌಶಿಕನ ದೌಷ್ಟ್ಯವೇ ಆಧ್ಯಾತ್ಮಿಕ ಜಗತ್ತಿನಲ್ಲಿ ಸಂಪೂರ್ಣವಾಗಿ ಇಳಿಯುವ ಹಾಗೆ ಮಾಡಿತೆನ್ನಬಹುದು. ಕವಯತ್ರಿಯರು ಕಾಣುವಂತೆ ಆಕೆಯ ಎಲ್ಲಾ ಕಾವ್ಯಗಳಲ್ಲಿ ಆಕೆ ಭಿನ್ನ ಇತರ ಶರಣೆರಂತೆ ಕೌಟುಂಬಿಕ ಭದ್ರತೆಯ ಜೀವನವಲ್ಲ ಆಕೆಯದು. ಆಕೆ ಮತ್ತೆ – ಮತ್ತೆ ವೈರಾಗ್ಯವನ್ನು, ನಿರಸನವನ್ನು ತಂದುಕೊಳ್ಳ ಬಯಸುತ್ತಾಳೆ. ದೇಹ ಮನಸ್ಸುಗಳನ್ನು ದಂಡಿಸಿ, ಪಕ್ವವಾಗಿಸಲು ಪ್ರಯತ್ನಿಸುತ್ತಾಳೆ. ಮನೆಮನೆದಪ್ಪಡೆ ಕೈಯ್ಯೊಡ್ಡಿ ಬೇಡಬೇಕು ಬೇಡಿದಾಗಲೂ ಅವರು ನೀಡಬಾರದು ? ನೀಡಿದರೂ ಅದು ನೆಲಕ್ಕೆ ಬೀಳಬೇಕು. ಬಿದ್ದಾಗ ಎತ್ತಿಕೊಳ್ಳಲು ಹೋದರೂ ಅದಕ್ಕಿಂತ ಮೊದಲು ನಾಯಿ ಎತ್ತಿಕೊಳ್ಳಬೇಕು' ಎನ್ನುವ ಹೆಜ್ಜೆ ಹೆಜ್ಜೆಯ ದಂಡನೆ ಅವಳಿಗೆ ಪ್ರಿಯ, ನೋವೇ ಸುಖ ಅಭದ್ರತೆಯೇ ಸಂತೋಷ, ವೈರಾಗ್ಯವೆಂದರೆ ಚೆನ್ನಮಲ್ಲಿಕಾರ್ಜುನನೊಂದಿಗಿನ ಕಾಲ್ಪನಿಕ ಸಂಸಾರ, ದಿಗಂಬರವೇ ದಿವ್ಯಾಂಬರ – ಹೀಗೆ

ಭವಿಗಳ ದ್ವಂದ್ವಂಗಳಲ್ಲಿ ಅಕ್ಕನ ವಿಷಯದಲ್ಲಿ ತಿರುವು – ಮುರುವು. 'ದೈಹಿಕ'ದ ಬಗ್ಗೆ, 'ಐಹಿಕ'ದ ಬಗ್ಗೆ ಅಕ್ಕಳಿಗೆ ಅಭ್ಯಂತರವಿಲ್ಲ 'ಹಾವಿನ ಹಲ್ಲಕಳೆದು ಹಾವನಾಡಿಸಬಲ್ಲಡೆ ಹಾವಿನ ಸಂಗವೇ ಲೇಸು' ಎನ್ನುವುದನ್ನು ಕಂಡುಕೊಂಡವಳು ಆಕೆ. ಕೌಶಿಕನೊಳಗಿನ ಕಾಮದ ಹಾವಿನ ಹಲ್ಲು ಕಳೆದು ಆಟವಾಡಿಸುವುದು ಅವಳಿಗೆ ಸಾಧ್ಯವಿರಲಿಲ್ಲ. ತನ್ನೊಳಗಿನ ಕಾಮವನ್ನು ನಿಯಂತ್ರಿಸಲು ಶಕ್ತಿ ಮೀರಿ ಪ್ರಯತ್ನಿಸಿದ ಹಾಗೆ ವಚನಗಳಲ್ಲಿ ನಿರೂಪಿಸುತ್ತಾಳೆ.

ಅಕ್ಕ ಮಹಾದೇವಿಯದು ತನ್ನೆಲ್ಲಾ ವಚನಗಳಲ್ಲಿ ಹಸಿವು, ತೃಷೆ, ನಿದ್ರೆ, ಕಾಮ, ಕ್ರೋಧ, ಮೋಹ, ಲೋಭ, ಮದ, ಮತ್ಸರ, ಸಚರಾಚರಗಳನ್ನು ನಿಲ್ಲಿಸುವ ಯತ್ನ ಅವಳದು. 'ಬಲೆಯ ಹೊಕ್ಕು ಉರಿ ಮರೆತವಳು. 'ಸರವೂ ನಿಸ್ಸರವೂ ಒಂದಾದವಳು' ಹೀಗೆ ಆಕೆಯೇ ಈ ವೈದೃಶ್ಯಗಳನ್ನು, ಬೆಸುಗೆಯನ್ನು ಕಟ್ಟಿಕೊಡುತ್ತಾಳೆ. ಐಹಿಕ ಪಾರಮಾರ್ಥಿಕಗಳನ್ನು ವಿಶಿಷ್ಟವಾಗಿ ಬೆರೆಸುವುದು ಆಕೆಗಷ್ಟೇ ಸಾಧ್ಯವೆನಿಸುತ್ತದೆ.

'ಸ್ತ್ರೀಗೆ ಪುರುಷ ಮಾಯೆ' ಎನ್ನುವುದು ಆಕೆಯ ಅನುಭವ. ಹೆಣ್ಣು ಮಾಯೆ ಎಂಬ ಚರ್ವಿತಚರ್ವಣ ನುಡಿ ಅವಳಲ್ಲಿ ಹೊಸ ರೂಪ ಪಡೆದುಕೊಳ್ಳುತ್ತದೆ. ಅಷ್ಟೇ ಸಹಜವಾಗಿ ಗಂಡು ಕೂಡಾ ಹೆಣ್ಣಿಗೆ ಮಾಯೆಯಾಗಿ ಕಾಡಬಲ್ಲ ಎನ್ನುವುದು ಅವಳಿಗೆ ಗೊತ್ತು. ವ್ರತಭಂಗ ಮಾಡುವ ಹೆಣ್ಣಿಗೆ ಮಾಯೆಯಾಗಬಲ್ಲ ಗಂಡಿನ ರೂಪದಲ್ಲೆ ಚೆನ್ನಮಲ್ಲಿಕಾರ್ಜುನನನ್ನು ನೋಡುತ್ತಾ ದೌರ್ಬಲ್ಯಕ್ಕೆಳಸುವುದನ್ನೇ ತನ್ನ ಶಕ್ತಿಯನ್ನಾಗಿ ಪರಿವರ್ತಿಸಬಲ್ಲ ಸಮನ್ವಯದ ರೀತಿ ಅಕ್ಕನದು. ಕಾಮವನ್ನು ಪ್ರೇಮವಾಗಿ, ಪ್ರೇಮವನ್ನು ಭಕ್ತಿಯಾಗಿ, ಭಕ್ತಿಯನ್ನು ನಿಷ್ಕಾಮವಾಗಿಸುವ ಕಲೆಯನ್ನು ಕೈವಶಮಾಡಿಕೊಳ್ಳುತ್ತಾ ಭವಗೆದ್ದ ಮಗಳಾಗಿ ಚೆನ್ನಮಲ್ಲಿಕಾರ್ಜುನನನ್ನು ಸೇರುವ ಒಲೆಯೊಳಗಿದ್ದು ಉರಿಮರೆತವಳ ರೀತಿ ಅಕ್ಕನದು.

'ಕದಳಿ' ಎನ್ನುವುದನ್ನು ವಿಶಿಷ್ಟವಾಗಿ ಅರ್ಥೈಸುತ್ತಾಳೆ ಅಕ್ಕ. ಅದು ಐಹಿಕವಾದುದು. ಅದನ್ನು ಗೆಲ್ಲುವುದು ಆಕೆಯ ಅಭೀಷ್ಟೆ. ಕದಳಿಯೆಂಬುದು ತನು, ಕದಳಿಯೆಂಬುದು ಮನ, ಕದಳಿಯೆಂಬುದು ವಿಷಯಗಳು, ಕದಳಿಯೆಂಬುದು ಭವ ಘೋರಾರಣ್ಯ, ಅಂಥ ಕದಳಿಯ ಬನದಲ್ಲಿ 'ಭವಹರನ್ ಕಂಡೆನು' ಎನ್ನುವ ವಚನ ಅವಳ ಬದುಕಿನ ಉದಾಹರಣೆಯೇ ಆಗಿದೆ. ಭವದಲ್ಲಿದ್ದೇ ಭವಹರನ ಕಂಡ ಐಹಿಕ ಉಪಮೆಗಳ ಮೂಲಕವೇ ದೇವರನ್ನು ಪ್ರೀತಿಸಿದ, ನಿರಾಕಾರವನ್ನು ಸಾಕಾರನ ಹಾಗೆ ಕಲ್ಪಿಸಿ, ಪರಮಾರ್ಥವನ್ನು ಇಹಕ್ಕೂ, ಇಹವನ್ನು ಪರಮಾರ್ಥಕ್ಕೂ ತಂದು ಗೆದ್ದವಳೀಕೆ.

---

(ಅಕ್ಕಮಹಾದೇವಿ, ಲೀಲಾದೇವಿ, ಆತ ಪ್ರಸಾದ್‌ರವರ ಕೃತಿಯಲ್ಲಿ ೪೪ನೇ ಪುಟದಲ್ಲಿ ಉಲ್ಲೇಖಿತವಾದ ಸಾಲುಗಳ ಹೋಲಿಕೆ ಇದೆ)

ಅಕ್ಕ ಕಂಡ ಕದಳಿ ವನವು ಒಂದು ಘೋರವಾದ ಅರಣ್ಯ ಅಲ್ಲಿ ಇಂದಿಗೂ ಹೋಗಲು ಹಿಂಜರಿಯುವವರೇ ಅನೇಕರು. ಇಪ್ಪತ್ತನೆಯ ಶತಮಾನದಲ್ಲಿ ಕದಳಿಯ ಹೊಕ್ಕು ಘೋರಾರಣ್ಯವ ಭೇದಿಸಿದುದನ್ನು ಕಂಡಾಗ ಅವಳ ಧೈರ್ಯ ಸಾಹಸಗಳು ವರ್ಣನಾತೀತವಾದರೂ ಮೆಚ್ಚುವಂತಹದು. ಅವಳು ಇಟ್ಟ ಗುರಿ, ಮನ ನೆಟ್ಟ ನಿಷ್ಠೆ, ಹುಸಿ ಹೋಗಲಿಲ್ಲ. ಅಳಿಮನದವರೆಗೆ ಕದಳಿಯು ಭೇದಿಸಲಾರದ ಭಯಪಡುವ ಅಭೇದ್ಯವಾದ ಅರಣ್ಯ ಅದರಲ್ಲಿರುವ ಖಗಮೃಗಗಳ ಕ್ರೂರತೆಗಿಂತ ಇವರ ಮನದ ಭಯವು ಅತಿಕ್ರೂರವಾಗಿ ಹಿಂದೇಟು ಹಾಕಿಸುವುದು ತನ್ನತನವನ್ನು ಅರಿತು ಎಲ್ಲವನ್ನೂ ತಿಳಿದ ಮಹಾದೇವಿಗೆ ಕದಳಿಯ ವನವು ಕಲ್ಪತರುವಂತೆ ಗೋಚರಿಸುವುದು. ಗಿಡಗಳೆಲ್ಲವೂ ಮರುಜವಣಿಯಂತೆ ಕಾಣುವವು. ಆ ಮನವಿದ್ದ ನೆಲವು ಅವಿಯುಕ್ತ ಕ್ಷೇತ್ರ ಅಲ್ಲಿಯ ಶಿಲೆಗಳಲ್ಲಿ ವರುಷರ ಮಣಿಯೆಂದು ತಿಳಿಯುವಳು. ವನದಲ್ಲಿ ವನವನೆಲ್ಲಾ ಸುತ್ತಿ ಬಳಸಿ ನಿಂತ ಜಲವು ಅಮೃತದ ಬುಗ್ಗೆಯೂ, ಖಗ ಮೃಗಗಳಲ್ಲಿ ಕಾಮಧೇನುವು, ನಡೆಯುತ್ತಿರುವಾಗ ಎಡವಿದಡೆ ಬೆರಳುಗಳಿಗೆ ತಾಗುವ ಹರಳುಗಳಲ್ಲಾ ಚಿಂತಾಮಣಿಗಳಾಗಿ, ಜಡತ್ವವ ಕಳೆದು ಶಿವತ್ವದ ತುಂಬುವವು ಎಂಬ ಭಾವನೆ ಅವಳಿಗೆ ಭಯದ ನೆರಳನ್ನು ಕಿಂಚಿತ್ತೂ ಕಾಣಗೊಡುವುದಿಲ್ಲ. ಭಯಪಡದೆ ಭಕ್ತಿಯಿಂದ ಕದಳಿಯನ್ನು ಹೊಕ್ಕಳು. "ಮಾಟ ಕೂಟ ಬಸವಣ್ಣರಿಗಾಯಿತು, ನೋಟ ಕೂಟ ಪ್ರಭುದೇವರಿಗಾಯಿತು, ಭಾವ ಕೂಟ ಅಜಗಣ್ಣಗಾಯಿತು. ಸ್ನೇಹ ಕೂಟ ಚಾಟಿ ರಾಜರಿಗಾಯಿತು. ಇವರೆಲ್ಲರ ಕೂಟ ಚೆನ್ನ ಬಸವಣ್ಣರಿಗಾಯಿತು" ಎನಗಾವ ಕೂಟವು ದೊರೆಯಲಿಲ್ಲ. ಆದರೆ ಆ ಕೂಟದೊಳಗೆ ಅವರಾರೂ ಇರಲಿಲ್ಲವಯ್ಯಾ ಕಾರಣ ಗುರು ಮುಖದಿಂದ ಲಿಂಗವ ಪಡೆದು ಆ ಲಿಂಗವೆ ಎನ್ನಂಗವೆಂದು ಅರಿದು "ಶರಣ ಸತಿ, ಲಿಂಗ ಪತಿ" ಎಂಬ ತತ್ವವ ಹಿಡಿದು ಭಕ್ತಳಾಗಿ ಗುರು ಲಿಂಗ ಜಂಗಮಕ್ಕೆ ತನು, ಮನ, ಧನಗಳ ಅರ್ಪಿಸಿ ಕಾಯ, ಕರ್ಮವ, ಮೋಹ, ವ್ಯಾಕುಲತೆಗಳ ಮೆಟ್ಟಿ ಅಷ್ಟಾವರಣ ಷಟ್‌ಸ್ಥಲ, ಪಂಚಾಚಾರಗಳನ್ನು ಕ್ರಮಬದ್ಧವಾಗಿ ನಡೆಸಿಕೊಂಡು ಬಂದು ಶರಣ ಸಂಗಡ ಅಮೃತದ ಸುಧೆಯ ಸಿರಿಯಲ್ಲಿ ತೇಲಾಡಿ ಪರಿಶುದ್ಧಳಾದೆ. ನಾನಿಂದು ಮೂಲದ್ವಾರದ ಬೇರನ್ನು ಮೆಟ್ಟಿ ಭೂಮಂಡಲವನೇರಿ ನಿಂತಿರುವೆ ಆಚಾರದ ಬೇರ ಹಿಡಿದು ಐಕ್ಯದ ತುಟ್ಟ ತುದಿಯ ಮುಟ್ಟಿರುವೆ. ವೈರಾಗ್ಯದ ಸೋಪಾನದಿಂದ ಶ್ರೀಗಿರಿಯನ್ನೇರಿ ಧನ್ಯಳಾಗಿರುವೆ. 

ತನುಮನ ವಿಷಯಗಳೆಂಬ ಭವ ಘೋರವಾದ ಕದಳಿಯನ್ನು ಸರ್ವಾರ್ಪಿತ ಭಾವದಿಂದ ಗೆಲ್ದು ಅದರಲ್ಲಿ ಭವ ತುಂಬಿ, ಹೃದಯ ತುಂಬಿ ಬಂದಿರಲು ಏನೂ ಮಾತನಾಡದೆ ಕಣ್ತುಂಬಿ ಆನಂದಾಶ್ರುಗಳಿಂದ ಅಭಿಷೇಕವ ಮಾಡುತ್ತಿದ್ದಳು. ಭಾವ – ನಿರ್ಭಾವಗೊಂಡು, ಮನ ಮೌನ ತಾಳಿ ಆ ಮೌನವೇ ಮಾತನಾಡಿತು. ಮಗಳ ಮನದಾಸೆಯ ಕಂಡು ಭವ ಗೆದ್ದು ಬಂದು ಮಗಳೆಂದು ಕರುಣದಿಂದ ಕರೆದು ಬಿಗಿದಪ್ಪಿ ಕರೆದು ಬಿಗಿದಪ್ಪಿದನು. ಅಪ್ಪುಗೆಯ ಸುಖದಲ್ಲಿ ಮಿಂದು ಮೀಯುತ್ತ ಆ ದೇವನ ಹೃದಯ ಕಮಲದಲ್ಲಿ ಅಡಗಿದಳು.

ಹೆಂಡತಿ ಭವಿಯಾಗಿದ್ದು, ಗಂಡ ಭಕ್ತನಾದರೆ 'ಭಾಂಡ ಭಜನವಿಲ್ಲದವರ ಭಕ್ತಿ ಹೆಂಡದ ಮಡಿಕೆಯ ಹೊರಗೆ ತೊಳೆದಂತೆ" ಸತ್ತನಾಯ ತಂದು ಅಟ್ಟದ ಮೇಲೆ ಇಳುಹಿ ಒಬ್ಬರೊಪ್ಪಚ್ಚಿ ಹಂಚಿಕೊಂಡು ತಿಂದಂತೆ" ಬೇರೆ ದೇವರನ್ನು ಪೂಜಿಸುವ ಸತಿ ಮನೆಯಲ್ಲಿದ್ದರೆ ಶ್ವಾನನಿಗಿಂತ ಕಷ್ಟ ಎಂದರು ಶರಣರು. ಆದರೆ ಭಕ್ತೆ ಹೆಂಡತಿಯಾಗಿ ಭವಿ ಗಂಡನಾಗಿರುವ ಸಂದರ್ಭದಲ್ಲಿ ಪರಿಹಾರ ಏನು ? ಎನ್ನುವುದಕ್ಕೆ ಉತ್ತರ ರೂಪದಲ್ಲಿ ಅಕ್ಕಮಹಾದೇವಿ ವ್ಯವಹರಿಸುತ್ತಾಳೆ. ಅಕ್ಕ ಸರ್ವಾರ್ಪಿತ ಭಾವದಿಂದ ಅನನ್ಯ ಭಕ್ತಿಯಿಂದ ಲಿಂಗದಲ್ಲಿ ತನ್ನ ಕಣ್ಣುಗಳ ಬೆಳಗನ್ನು ನೆಟ್ಟು ಎವೆಯಿಕ್ಕದೆ ನೋಡುತಲಿದ್ದಳು. ನಂಬಿದೆನೆಂದೆಡೆ ನಚ್ಚಿದೆನೆಂದಡೆ ಸಲೆಮಾರು ಹೋದೆಸೆಂದಡೆ ತನುವನಲ್ಲಾಡಿಸಿ ನೋಡುವ ಮನವನಲ್ಲಾಡಿಸಿ ನೋಡುವ, ಧನವನಲ್ಲಾಡಿಸಿ ನೋಡುವ ಅದಕ್ಕಂಜದಿದ್ದರೆ ಶಿವ ತನ್ನಂತೆ ಮಾಡಿಕೊಳ್ಳುವ ಅಕ್ಕ ಅವಿರತ ಹೋರಾಟದ ಫಲವಾಗಿ ಲಿಂಗಮುಖದಲ್ಲಿ ಮಹಾಬೆಳಕಿನ ಕಿರಣವು ಮೈದೋರಿ ನಿಂತಿತು. ಬೆಳಗಿನೊಂದಿಗೆ ಮಹಾಬೆಳಗ ಕೂಡಿ ನಿಜ ರೂಪವ ತೋರಿದನು. ಇಂತಪ್ಪ ಸೊಬಗಿನ ಸಿರಿಯ ಕಣ್ ದಣಿಯೆ ಕಂಡು ಮನಪುಳಕಿತಗೊಂಡು ಕಣ್ ಬಿಂದುಗಳು ಹೊರಬಂದವು. ಹೃದಯ ಹೂವಂತೆ ಅರಳಿ ಪಾದ ಪದ್ಮಂಗಗಳ ಮೇಲೆ ಕುಳಿತಿತ್ತು. ಆ ಹೂವನು ದೇವ ತನ್ನ ಮುಡಿಯೊಳ್ ಮುಡಿದು ಆನಂದ ಹೊಂದಿದನು. ಅಕ್ಕ ತನು, ಮನ, ಭಾವಗಳು ದಣಿಯುವಂತೆ ನೋಡಿ ಸಂತೋಷಿಸಿದಳು. ಕೇಳಿ ಕಾಣದ ದಿವ್ಯ ಸ್ವರೂಪವ ಕಂಡು ಕಣ್ಗಳ ಬರವನ್ನು ಹಿಂಗಿಸಿಕೊಂಡಳು. ದೇವ ತನ್ನ ಕರಕಮಲಗಳ ಮುಂದು ಮಾಡಿ ಕಂದಾ ಬಾಯೆಂದು ಕರೆಯಲು ಮಾರಹರನನ್ನು ಅಪ್ಪಿ ಆ ದೇವನಲ್ಲಿ ಒಂದಾದಳು. ಸಾಲೋಕ್ಯ, ಸಾಮೀಪ್ಯ, ಸಾರೂಪಯ, ಸಾಯುಜ್ಯವೆಂಬ ಮೋಕ್ಷಕ್ಕೆ ಮೆಟ್ಟಿಲುಗಳನ್ನು ದಿಟ್ಟತನದಿಂದ ಹತ್ತಿ ಮೋಕ್ಷವ ಪಡೆದ ಅಕ್ಕ ಶಿವಸಾಯುಜ್ಯವನ್ನು ಪಡೆದಳಾಗಿ ಘನಲಿಂಗದ ದರುಶನದ ದೊರೆತು ಸಾಮರಸ್ಯವ ಹೊಂದಿ ಏನನ್ನೂ ಹೇಳದೆ ಮೌನಿಯಾಗಿದ್ದಳು.

ಶರಣಸತಿ ಲಿಂಗಪತಿ ಎನ್ನುವ ನಂಬಿಕೆ ಪಾರಂಪರಿಕ ನಿಯಮಗಳನ್ನು ಬಲಪಡಿಸುವಂಥದ್ದು ಲಿಂಗ ಘನವಾದದ್ದು ಆದುದರಿಂದ ಪರಿಶರಣ ತೃಣಸಮಾನ ; ಆದ್ದರಿಂದ ಪತಿ ತೃಣ ಘನಕ್ಕೆ ಅರ್ಪಿತವಾದಂತೆ ಸತಿಪತಿಗೆ ಅರ್ಪಿತ ಆ ತಾತ್ವಿಕತೆ ಸಂಪ್ರದಾಯ ಶರಣವಾದದ್ದು. ತನುಮನದ ವಿಷಯಂಗಳ ಗೆದ್ದು ಅಂಗ ನಂಗವ ಹಿಂಗಿ, ಲಿಂಗ ಸಂಗದಿ ಮೆರೆದ ಅಕ್ಕ ತನ್ನ ದೇವನಲ್ಲಿ ಒಂದಾಗಿ ಹೋದಳು. ಕಿರಿದೆಂಬ ಭಾವದಲ್ಲಿ ಹಿರಿತನವ ಮೆರೆದು ಮೂಲೋಕ ಮಿಕ್ಕಿದ ಅವಳು ನಿರ್ಮಾಯೆ, ನಿರ್ಮಲೆ, ನಿರಹಂಕಾರಿ, ನಿರುಪಮೆ, ನಿರಂಜನೆ, ನಿಜ್ಯಪರಿಪೂರ್ಣೆ, ನಿರಂಜ್ಯೋತಿ, ನಿತ್ಯಸೌಭಾಗ್ಯವಂತೆ ಎಂದು ಅಕ್ಕ ಕೊಂಡಾಡುವಳು. ಮೆಟ್ಟಿಲು ಹಾಸಿದ ಮಡಿಯ ತನ್ನ ಅಂಗಕ್ಕೆ ಹೊದ್ದುಕೊಂಡು ಮೆರೆದ ಮಹಾತ್ಮೆ ತನ್ನ ದೇಹ ಜೀವಗಳನ್ನು ದೇವನಿಗೆ ಅರ್ಪಿಸಿ ಅಮರಳಾದವಳು.

ಅಕ್ಕ ಶಿವಸಾಯುಜ್ಯವನ್ನು ಹೊಂದಿದಳೆಂಬ ವಾರ್ತೆಯು ದಶ ದಿಕ್ಕುಗಳಲ್ಲಿ ಹಬ್ಬಿ ನಿಂತಿತು. ಅವಳ ಮಾರ್ಗಕ್ಕೆ ಅಡ್ಡಿಯಾಗಿ ಬಂದವರು. ಪ್ರೋತ್ಸಾಹಕೊಟ್ಟು ಸಹಕರಿಸಿದವರೆಲ್ಲ ಮಮ್ಮಲ ಮರುಗಿದರು. ತಮ್ಮಲ್ಲಿಯೇ ಹುಟ್ಟಿ ತಮ್ಮೊಡನಿದ್ದು ಬಾಳಿ ಬೆಳಗಿದ ಮಹದೇವಿಯ ಘನಮಹಿಮೆಯನ್ನು ಕೊಂಡಾಡಿದರು.

ಸ್ತ್ರೀ ಪುರುಷರಲ್ಲಿ ಸ್ತ್ರೀಗೆ ಲಘುತ್ವವೂ, ಪುರುಷನಿಗೆ ಪ್ರಭುತ್ವವೂ ಅಂಗೀಕೃತ ರೀತಿ ಅಕ್ಕ ಸಹ ಸಹಜವಾಗಿ ತನ್ನ ಸ್ತ್ರೀತ್ವವನ್ನು ದೇವರಿಗೆ ಅರ್ಪಿಸುತ್ತಾಳೆ. ತನ್ನ ಕಾಯದ ಸುಖ ಬೋಗದ ಲಿಂಗವ ಭೋಗಿಸುವನಾಗಿ ಶರಣಸತಿ ಲಿಂಗಪತಿಯಾಗುತ್ತಾಳೆ. ಶರಣರು ಈ ನಿಸ್ಪೃಹತೆಗೋಸ್ಕರ ಹೆಣ್ಣಾಗುತ್ತಾರೆ. ಸತಿಯೆಂದು ಕಲ್ಪಿಸಿಕೊಳ್ಳುತ್ತಾರೆ. ಲಿಂಗ ಹೆಣ್ಣಾಗಿ ತಾನು ಗಂಡಾಗುವ ಪಲ್ಲಟ ಬಹುಶಃ ನಮ್ಮ ಸಮಾಜದಲ್ಲಿ ಸಾಧ್ಯವೇ ಇಲ್ಲ. ಆದರೂ ಹೆಣ್ಣಿಗೆ ಮೋಕ್ಷವಿಲ್ಲ ಎಂಬ ಸಾಂಪ್ರದಾಯಿಕ ನಂಬಿಕೆಗಳ ಮಧ್ಯೆ ಹೆಣ್ಣಾಗಿಯೇ, ಸತಿಯಾಗಿಯೇ ಮೋಕ್ಷವನ್ನೊಂದುವ ಹಾಗೂ ನಿರ್ವಯಲಾಗುವ ವಿಶಿಷ್ಟತೆ ೧೨ನೆಯ ಶತಮಾನದ ವಚನ ಚಳುವಳಿಯ ಕೊಡುಗೆಯೆನ್ನಬಹುದು. ಅಕ್ಕಮಹಾದೇವಿಯ ವಿಚಾರ, ಬದುಕಿನ ರೀತಿ ಇಂದಿನ ಮಹಿಳೆಯರನ್ನು ಪ್ರಭಾವಿಸಿದೆ.

ಸ್ತ್ರೀಯರನ್ನು ಅಸಮಾನತೆಯ ನೆಲೆಯಲ್ಲೇ ಉಳಿಸಿಡಲು ಬಳಕೆಯಾಗುತ್ತಿದ್ದ ಅನೇಕ ಸಾಮಾಜಿಕ ನಂಬಿಕೆ, ಕಲ್ಪನೆ, ರೀತಿ – ರಿವಾಜುಗಳನ್ನು ಶಿವಶರಣರು ಬಲವಾಗಿ ಖಂಡಿಸಿದರು. 'ಹೆಣ್ಣು ಮಾಯೆಯಲ್ಲ ಮನದ ಮುಂದಣ ಆಸೆಯೇ ಮಾಯೆ' ಹೆಣ್ಣು ಹೆಣ್ಣಲ್ಲ, ಹೆಣ್ಣು ರಾಕ್ಷಸಿಯಲ್ಲ, ಹೆಣ್ಣು ಪ್ರತ್ಯಕ್ಷ ಮಲ್ಲಿಕಾರ್ಜುನ ; ಸತಿ ಭಕ್ತೆಯಾದಡೆ ಹೊಲೆಗಂಜಲಾಗದು" ಒಳಗಿರುವ ಆತ್ಮ ಹೆಣ್ಣೂ ಅಲ್ಲ ; ಗಂಡೂ ಅಲ್ಲ' ಮುಂತಾದ ಶರಣರ ವಿಚಾರಗಳಿಗೆ ಪ್ರಬಲವಾದ ತಾತ್ವಿಕ ನೆಲೆಯೊಂದು ಇತ್ತು. ಪರಶಿವನೊಬ್ಬನೇ ಪುರುಷ. ಆತನನ್ನು ಉಳಿದು ಸಕಲ ಸೃಷ್ಟಿಯೂ, ಅದರಲ್ಲಿನ ಸ್ತ್ರೀಯರೂ, ಪುರುಷರೂ ಸ್ತ್ರೀಯೇ ಎಂದು ನೋಡುವಂಥ ದೃಷ್ಟಿ ಅದಾಗಿತ್ತು. 'ಶರಣಸತಿ ಲಿಂಗಪತಿ' ತತ್ವದ ಇಂಥ ನಂಬಿಕೆಯಿಂದಾಗಿ ಶರಣರು ಸ್ತ್ರೀ – ಪುರುಷರೆಂಬುದು ಕೇವಲ ಹೊರಗಿನ ತೋರಿಕೆ ಮಿಥ್ಯೆ ಎಂದು ಸಾರಿದಳು. ಇಂಥ ಆಧ್ಯಾತ್ಮಿಕ ನೆಲೆಯಲ್ಲಿ ಮೋಕ್ಷ ಸಾಧನೆಗೆ ಸ್ತ್ರೀಯರಿಗಗೂ ಪುರುಷರ ಸಮಾನವಾದ ಅರ್ಹತೆಯನ್ನು ನೀಡಲಾಯಿತು.

ಹೆಣ್ಣಿನ ಬಗ್ಗೆ ಇದ್ದ ಅಪವಿತ್ರಳೆಂಬ ಭಾವನೆಯನ್ನು ತೊಡೆಯಲು ಯತ್ನಿಸಿದಳು. ಗುರುಕಾರುಣ್ಯದಲ್ಲಿ ಉತ್ಪತ್ತಿಯಾದ ಅಜಾತರಿಗೆ ಜಾತಿ ಸೂತಕ, ಜನನ ಸೂತಕ, ಪ್ರೇತ ಸೂತಕ, ರಜಸೂತಕ, ಉಚ್ಚಿಷ್ಟ ಸೂತಕವಿಲ್ಲ ಎಂದು ಸಾರಿದರು. ಅಲ್ಲದೆ ಲಿಂಗದೀಕ್ಷೆ, ವಿಭೂತಿಧಾರಣೆ, ಮಂತ್ರ ಪಠಣಗಳಂಥ ವಿಧಿಗಳಲ್ಲಿ ಸ್ತ್ರೀಯರಿಗೂ ಅಧಿಕಾರ ನೀಡುವ ಮೂಲಕ ಕಾರ್ಯರೂಪದಲ್ಲೂ ಆಕೆ ಸರ್ವಕಾಲದಲ್ಲೂ ಸಾಧನೆಗೆ ಅರ್ಹಳೆಂಬುದನ್ನು ಸ್ಥಾಪಿಸಿದರು. ಸ್ತ್ರೀಯರಲ್ಲಿ ದೈವತ್ವವನ್ನು ಕಾಣಬೇಕು. ಪರಸ್ತ್ರೀಯರನ್ನು ತಾಯಿಯಂತೆ ಕಾಣಬೇಕು. ಎಂಬಂಥ

ನೈತಿಕ ನಿಯಮಗಳ ಮೂಲಕ ಸ್ತ್ರೀಯನ್ನು ಭೋಗವಸ್ತುವಿಗಿಂತ ಭಿನ್ನವಾಗಿ ಗೌರವಯುತವಾಗಿ ಕಾಣುವುದನ್ನು ಜನರಲ್ಲಿ ಬೆಳೆಸಲು ಯತ್ನಿಸಿದರು. ಆಧ್ಯಾತ್ಮಿಕ, ನೈತಿಕ ಹಾಗೂ ಕೆಲಮಟ್ಟಿನ ವೈಚಾರಿಕ ನೆಲೆಗಳಲ್ಲಿ ಈ ರೀತಿ ಸ್ತ್ರೀಯರನ್ನು ಪುರುಷ ಸಮಾನ ನೆಲೆಯಲ್ಲಿ ಕಂಡು, ಭಾವಿಸಿದ್ದರಿಂದಾಗಿ ಶಿವಶರಣರು ತರಲೆತ್ನಿಸಿದ ಇಂಥ ಬದಲಾವಣೆಗಳ ಪ್ರಯೋಜನವನ್ನು ಅವರ ಕುಟುಂಬಗಳ ಮಹಿಳೆಯರು ಪಡೆದರು. ಅಷ್ಟೇ ಅಲ್ಲದೆ ಅವರೂ ಸಕ್ರಿಯವಾಗಿ ಅಂದಿನ ಧಾರ್ಮಿಕ, ಸಾಮುದಾಯಿಕ ಚಟುವಟಿಕೆಗಳಲ್ಲಿ ಪಾಲ್ಗೊಳ್ಳುವುದು ಸಾಧ್ಯವಾಯಿತು. ಹೆಣ್ಣನ್ನು ಭೋಗವಸ್ತುವೆಂದು ಮಾತ್ರ ಕಾಣಲು ಕಾರಣವಾಗಿದ್ದ ಆರ್ಥಿಕ, ಸಾಮಾಜಿಕ ಕಾರಣಗಳನ್ನು ಕಂಡು ನಿವಾರಿಸುವಂತಹ ವಿಚಾರಗಳು ಭಕ್ತಿ ಮತ್ತು ಮೋಕ್ಷವನ್ನೇ ಕೇಂದ್ರವಾಗಿಟ್ಟುಕೊಂಡಿದ್ದ ಆ ಯುಗಕ್ಕೆ ಮೀರಿದುದಾಗಿದ್ದವು. ಗಂಡ ಭಿನ್ನಧರ್ಮದವನಾದರೆ ಹೆಂಡತಿ ಆತನನ್ನು ತನ್ನ ನಂಬಿಕೆಗೆ ತಿದ್ದುವುದು ಇಲ್ಲವೆ ಅವನನ್ನು ತೊರೆದು ತನ್ನ ಲಿಂಗನಿಷ್ಠೆಯನ್ನು ಕಾಯ್ದುಕೊಳ್ಳುವುದು.

ಊಳಿಗಮಾನ್ಯ ವ್ಯವಸ್ಥೆಯಡಿಯಲ್ಲಿ ಶಿವಶರಣರು. ಆ ನಂಬಿಕೆಯನ್ನು ಧಿಕ್ಕರಿಸಿ ಪರಶಿವನೇ ಜಗದ ಏಕೈಕ ಯಜಮಾನನೆಂಬ ಅವರ ಉದಾತ್ತೀಕೃತ ನಂಬಿಕೆಯನ್ನು ಎತ್ತಿಹಿಡಿದರು. ಅದುವರೆಗೆ ಗಂಡನೇ ಮನೆಯ ಒಡೆಯ ಎಂದು ನಂಬಿ ಬಾಳುವ ಸ್ಥಿತಿಯಲ್ಲಿದ್ದ ಸ್ತ್ರೀಯರೂ 'ಗಂಡ ಮನೆಗೆ ಒಡೆಯನಲ್ಲ' ಲಿಂಗವೊಂದೇ ನಿಜವಾದ ಒಡೆಯನೆಂಬ ನೆಲೆಯಲ್ಲಿ ತಮ್ಮನ್ನು ಪರಮಾತ್ಮನ ತೊತ್ತುಗಳು ಎಂದು ಭಾವಿಸಿಕೊಳ್ಳುವುದು ಅವಶ್ಯಕವಾಯಿತು. ಈ ಹೊಸ ನೆಲೆಗೆ ಒಗ್ಗಿಕೊಂಡವರು. 'ಲಿಂಗವೇ ಪತಿ' ಯೆಂಬ ಸರ್ವಾರ್ಪಣ ಭಾವದಿಂದ ಕುಟುಂಬವನ್ನು ತೊರೆದಂಥ ವಿರಕ್ತಿಯರಾದ ಸತ್ಯಕ್ಕ, ಅಕ್ಕನಂತವರು. ಇವರು ಪರಶಿವನೊಂದಿಗೆ ನೇರವಾಗಿ ಸಂವಾದಿಸುವುದು ತಮ್ಮ ಆಧ್ಯಾತ್ಮಿಕ ಭಾವನೆಗಳನ್ನು ಲೌಕಿಕ ದಾಂಪತ್ಯದ ಪ್ರತೀಕಗಳಲ್ಲಿ ಹೇಳಿಕೊಳ್ಳುವುದು, ಜೊತೆಗೆ ಸ್ವತಂತ್ರರೂಪದ ವಚನ ಅಂಕಿತಗಳನ್ನು ರೂಪಿಸಿಕೊಂಡಿರುವುದು ಗಮನಾರ್ಹ.

ಸಂಸಾರವೂ ಪರಮಾರ್ಥ ಸಾಧನೆಗೆ ಸಾಧನವೆಂಬ ವೀರಶೈವ ತಾತ್ವಿಕ ನೆಲೆಗೆ ಅನುಗುಣವಾಗಿ ಗೃಹಿಣಿಯಾಗಿದ್ದ ಶಿವಶರಣೆಯರ ಸ್ಥಿತಿ ಈ "ಶರಣಸತಿ ಲಿಂಗಪತಿ" ಎಂಬ ತತ್ವದಲ್ಲಿ ಹೆಚ್ಚು ಗೊಂದಲಕ್ಕೆ ಒಳಗಾಗಿರಲು ಸಾಧ್ಯ. ಇಹಕ್ಕೊಬ್ಬ ಗಂಡನೇ, ಪರಕ್ಕೊಬ್ಬ ಗಂಡನೇ ಎಂಬುದನ್ನು ಅವರು ಕೇಳುವುದು ಸಾಧ್ಯವಿತ್ತೆ ? ಶಿವಶರಣರು ಈ ಗೃಹಿಣಿಯರಿಂದ ನಿರೀಕ್ಷಿಸುತ್ತಿದ್ದುದು ಇವರು ಪತಿಗೆ ಅನುಕೂಲವಾಗಿ ಇರಬೇಕು ಎನ್ನುವುದನ್ನೇ ಈ ಅನುಕೂಲ ಸತಿ ಎಂಬುದು ತಾತ್ವಿಕವಾಗಿ ಸಾಂಪ್ರದಾಯಿಕ ಗೃಹಿಣಿ ಧರ್ಮದ್ದೇ ನಾಮಾಂತರವಾಗಿತ್ತು. ಪತಿವ್ರತೆ, ಸಾಧ್ವಿ ಎನಿಸಲು ಒಬ್ಬ ಗೃಹಿಣಿ ವೈಧಿಕ ಧರ್ಮದಲ್ಲಿ ನಡೆಸಬೇಕಾದ ಬದುಕಿನ ವಿಧಾನಗಳ ಜೊತೆಗೆ ಗುರು – ಜಂಗಮಸೇವೆ, ದಾಸೋಹಗಳೂ ಸೇರಿದವು. ಗಂಡ ಶಿವಲಿಂಗ ದೇವರ ಭಕ್ತ ಹೆಂಡತಿ ಮಾರಿ ಮಸಣಿಯ ಭಕ್ತೆ ಎಂಬಂತಹ ಪರಿಸ್ಥಿತಿಯಲ್ಲಿ 'ಭಾಂಡಭಾಜನ ಶುದ್ಧಿ ಹೆಚ್ಚು ಅನ್ವಯವಾಗುವುದು ಹೆಂಡತಿಗೇ' ಸತಿಪತಿಗಳೊಂದಿಗೆ ಭಕ್ತಿ ಹಿತವಪ್ಪುದು, ಎಂಬ

ನಂಬಿಕೆಯಲ್ಲಿ ತಮ್ಮ ಕೆಳ ಸಾಂಸ್ಕೃತಿಕ ಮೌಲ್ಯಗಳಿಂದ ಶುದ್ಧೀಕರಣಕ್ಕೆ ಒಳಗಾದವರು ಶಿವಶರಣರಿಂದ ಉದ್ಧಾರಗೊಂಡ ಸ್ತ್ರೀಯರು, ಈ ಶುದ್ಧೀಕೃತ ನೆಲೆಯಲ್ಲಿ ಗೃಹಿಣಿ ಧರ್ಮ - ಪಾತಿವ್ರತ್ಯಗಳ ಶಿಷ್ಟ ಮೌಲ್ಯಗಳೊಳಗೆ ಬದುಕುವಲ್ಲಿ ಈ ಸ್ತ್ರೀಯರು ಹೊಸದಾಗಿ ಮತಾಂತರಗೊಂಡವರಲ್ಲಿ ತಮ್ಮ ಹೊಸಮತದ ಬಗ್ಗೆ ವ್ಯಕ್ತವಾಗುವ ಅತಿನಿಷ್ಠೆ ಅತ್ಯುತ್ಸಾಹಗಳನ್ನು ತೋರಿಸಿರುವುದುಂಟು. ಇಂಥ ಅತಿನಿಷ್ಠೆಯಿಂದ ವ್ರತಹೀನರ ಬಗ್ಗೆ ತೋರುವ ತೀಕ್ಷ್ಣ ವಿಮರ್ಶೆಯನ್ನೂ ಮಾಡಿದ್ದಾನೆ.

ಹೆಣ್ಣಿನ ಭಾವನೆಗಳು ಕೈಹಿಡಿದವನಿಗೆ ಮೀಸಲು ಎಂಬ ಸಾಂಪ್ರದಾಯಿಕ ನಂಬಿಕೆಯನ್ನು ಒಳಗೊಂಡೇ, ಅಕ್ಕಮಹಾದೇವಿ ಪಾವನತೆಯನ್ನು ಪರತತ್ವದೊಂದಿಗೂ, ಮಲಿನತೆಯ ಭಾವವನ್ನು ಸಂಸಾರಕ್ಕೂ ಅನ್ವಯಿಸುತ್ತಾಳೆ. ಅಕ್ಕನ ವಚನಗಳಲ್ಲಿ 'ನೀನು ನಾನು ಚೆನ್ನಮಲ್ಲಿಕಾರ್ಜುನ' ಎಂಬ ಪದಗಳು ಸಂಸಾರ, ಜೀವ, ಪರತತ್ವಗಳಾಗಿ, ಇವುಗಳ ನಡುವಿನ ಭಕ್ತೆಯ ಬಿಡುಗಡೆಯ ಹೋರಾಟ, ಅದರ ಸಲುವಾದ ತೊಳಲಾಟಗಳು ಮುಖ್ಯವಾಗುತ್ತವೆ. ಒಂದು ರೀತಿಯ ಸ್ವಗತ ಅಥವಾ ಏಕ ವ್ಯಕ್ತಿಯ ಜೊತೆಗಿನ ಸಂವಾದದ ರೀತಿ ಇವು ಕಾಣಿಸಿಕೊಳ್ಳುತ್ತವೆ. ಇಲ್ಲಿ ತನ್ನೊಳಗೇ ಚೇತನ ಪರವಾದ ಅಂತರ್ಮುಖತೆ ಇದೆ. ಅಕ್ಕ ಸುತ್ತಲಿನ ಸಮಾಜವನ್ನು ಉದ್ದೇಶಿಸಿ ತನ್ನ ಪಾರಮಾರ್ಥಿಕ ತಾತ್ವಿಕ ನೆಲೆಯನ್ನು ಖಚಿತ ಪಡಿಸಿ, ತಿಳಿಯ ಹೇಳುವಂಥ ವಚನಗಳಲ್ಲಿ ವಿಶೇಷ ರೀತಿಯ ದೃಢತೆ, ಆತ್ಮವಿಶ್ವಾಸಗಳು ಎದ್ದು ತೋರುತ್ತವೆ. ನಿದರ್ಶನವಾಗಿ ಲೋಕದ ಗಂಡನ ಸಂಬಂಧವನ್ನು ತಾನು ಒಪ್ಪಲಾರೆ ಎಂಬುದನ್ನು ಸಮಾಜಕ್ಕೆ, ಜನರಿಗೆ ಹೇಳುವಂತಹ ವಚನಗಳನ್ನು ನೋಡಬಹುದು. ಅಂತಹ ವಚನಗಳ ಬಗ್ಗೆ ಸಾಕಷ್ಟು ಚರ್ಚೆ ನಡೆದಿದ್ದು, ಇಲ್ಲಿ ಒಂದು ಅತಿ ಪ್ರಸಿದ್ಧವಾದ ವಚನವನ್ನು ಮಾತ್ರ ಎತ್ತಿಕೊಳ್ಳಬಹುದು.

> "ದಿಟಕ್ಕೊಬ್ಬ ಗಂಡನೆ ಸಟೆಗೊಬ್ಬ ಗಂಡನೆ ಅಯ್ಯ ?
> ಲೌಕಿಕಕ್ಕೊಬ್ಬ ಗಂಡನೆ ಪರಮಾರ್ಥಕ್ಕೊಬ್ಬ ಗಂಡನೆ ಅಯ್ಯ ?
> ಚೆನ್ನಮಲ್ಲಿಕಾರ್ಜುನನೆಂಬ ಮಾನವನೊಚ್ಚತಂಗೊಡಿರಲು
> ಬೀಸರವೋಗ ಬಲ್ಲುದೆಯಯ್ಯಾ ?"

ಇಲ್ಲಿಯತನಕ ನಾವು ಗಮನಿಸಿರುವ ಅಕ್ಕನ ಒಳತೋಟಿ, ಅದರಲ್ಲಿನ ದೀನತೆ, ಅಸಹಾಯಕತೆಗಳ ಹಿನ್ನೆಲೆಯಲ್ಲಿ ಮೇಲಿನ ವಚನದಲ್ಲಿನ ಆತ್ಮವಿಶ್ವಾಸದ ನೆಲೆಯನ್ನೂ ಗಮನಿಸಬೇಕು. ಇಲ್ಲಿ "ಒಚ್ಚತಂಗೊಂಡ" ಬೆಸುಗೆ ಬೀಸರವೋಗಲಾರದು. ಸರಿಹೋದದ್ದು ಬೇರಾಗಲು ಸಾಧ್ಯವೆ ಎಂಬಂಥ ದೃಢತೆ, ನಿಶ್ಚಿಂತತೆ ವ್ಯಕ್ತವಾಗುತ್ತದೆ. ಆಧ್ಯಾತ್ಮಿಕವಾಗಿ ಇಂಥ ಸಮಸ್ಥಿತಿಯನ್ನು ಸಾಧಿಸಲು ಅಕ್ಕಮಹಾದೇವಿ ನಿರಂತರವಾದ ಮನದ ಆತಂಕಗಳನ್ನು, ತೊಯ್ದಾಟ, ಹೊಯ್ದಾಟಗಳನ್ನು ಅನುಭವಿಸಿ, ಅದನ್ನು ಮೀರುವ ಹೋರಾಟವನ್ನೇ

ನಡೆಸಿರಬೇಕು ಎನ್ನುವುದು ಕಾಣುತ್ತದೆ. ಇಂಥ ಹೋರಾಟ, ಅದರಿಂದ ಕೊನೆಗೆ ಸಾಧಿಸಿದ ಸಾಮರಸ್ಯದ ಅನುಭವ.

ಇವು ಹುಟ್ಟು ಹಾಕಿದ ಆತ್ಮವಿಶ್ವಾಸದ ನೆಲೆಗಳಲ್ಲಿ ಅಕ್ಕನಿಗೆ 'ಇಹಕ್ಕೊಬ್ಬ ಗಂಡನೆ, ಪರಕ್ಕೊಬ್ಬ ಗಂಡನೆ, ಎರಡನ್ನೂ ನಡೆಸಲು ಬಾರದವ್ವಾ' ಎಂದು ಹೇಳುವುದು ಸಾಧ್ಯವಾಗಿದೆ ಎಂದರೆ ಎರಡನ್ನೂ ನಿಭಾಯಿಸುವುದು ಸಾಧ್ಯವಿಲ್ಲ ಎಂಬುದು ಆಕೆಯ ಅನುಭವದ ಮೂಲಕವೇ ಕಂಡುಕೊಂಡ ತತ್ವವೂ ಆಗಿದೆ. ಆದ್ದರಿಂದ ಅಕ್ಕನ ವೈವಾಹಿಕ ನೆಲೆ ಇರಲೇ ಇಲ್ಲವೆಂದು ನಿರಾಕರಿಸುವುದು ಸಾಧ್ಯವಾಗದು ಎಂಬುದಕ್ಕೆ ಈ ಬೆಳವಣಿಗೆಯೇ ದ್ವಂದ್ವಕ್ಕೆ ಎಡೆಮಾಡಿಕೊಡಬಲ್ಲದು.

ಅಕ್ಕನ ನೆಲೆಯ ಭಾವಗಳು "ನೀನೇ ಗಂಡನೆಂದಿದ್ದಲ್ಲಿ ಪರಪುರುಷರ ಮಾತನಾಡಿಸಿದೆಯಲಯ್ಯ" 'ಎನ್ನ ಮುಟ್ಟಿ ಪಾವನವ ಮಾಡಿ ಕಷ್ಟ ಸಂಸಾರಿಗೊಪ್ಪಿಸುವಂತೆ ಮಾಡಿದೆಯಯ್ಯ ಎಂಬಂತೆ ಅಳಲು ವ್ಯಥೆಗಳನ್ನು ದಾಟಿದ ನಂತರ ಚೆನ್ನಮಲ್ಲಿಕಾರ್ಜುನನೆನಗೆ ಕೈಹಿಡಿದ ಗಂಡನಲ್ಲದೆ ಮಿಕ್ಕಿನವರೆಲ್ಲರೂ ಮಾಗಿಲ್ಲದ ಬಣ್ಣದ ಬೊಂಬೆಗಳು ಕಾಣಯ್ಯ" ಎನ್ನುವುದು ಸಾಧ್ಯವಾಗಿರಬೇಕು. ಈ ನೆಲೆ ತಲುಪಿದ ನಂತರವೇ ಆಕೆಗೆ ಸತಿಯೆಂಬುದು ಮಾಟ ಪತಿಯೆಂಬುದು ಮಾಟ' ಎಂದು ದೃಢವಾಗಿರಬೇಕು. ಈ ನಶ್ವರವಾದ ಮಾನವ ಲೋಕದ ಸಂಬಂಧಗಳ ಹೊಯ್ದಾಟವ ತಪ್ಪಿ, ಶಾಶ್ವತವಾದ ಒಂದೇ ನೆಲೆಯನ್ನು ತನ್ನೊಳಗೂ ಖಚಿತಗೊಳಿಸಿಕೊಂಡು ಅದನ್ನೇ ಇತರರಿಗೂ ಸಾರಿ ಹೇಳಿ ತನ್ನ ನೆಲೆಯನ್ನು ಖಚಿತ ಪಡಿಸಲೆತ್ನಿಸಿರಬೇಕು.

"ಸಾವಿಲ್ಲದ, ಕೇಡಿಲ್ಲದ ರೂಹಿಲ್ಲದ ಚೆಲುವಂಗೆ........." ಎನ್ನುವ ವಚನದ ಕೊನೆಗೆ ಭಯವಿಲ್ಲದ ಭವವಿಲ್ಲದ ಚೆಲುವನ್ನು "ಸೀಮೆಯಿಲ್ಲದ ನಿಸ್ಸೀಮೆಯನ್ನು ತನ್ನ ಗಂಡನೆಂದು ಒಲಿದಿರುವುದಾಗಿ ಸಾರಿ ಹೇಳಿ, ಈ ಸಾವ ಕೆಡುವ ಗಂಡರನೊಯ್ದು ಒಲೆಯೊಳಗಿಕ್ಕುವೆನು" ಎನ್ನುತ್ತಾಳೆ. ಅಕ್ಕ ಸಾವು, ಕೇಡು, ಹೊರಗಿನ ಸೌಂದರ್ಯ, ಸ್ಥಾನ ಪ್ರತಿಷ್ಠೆಗಳು ಲೌಕಿಕ ಪತಿ – ಪತ್ನಿಯರ ಸಂಬಂಧಕ್ಕೆ ಕಾಡುವಂಥವು ಅದನ್ನು ನಿರಾಕರಿಸಿ, ಅಕ್ಕ ಅಲೌಕಿಕವಾದ ತನ್ನ ಆರಾಧ್ಯನಾದ ಪರತತ್ವದ ಎಲ್ಲಾ ಮಿತಿಗಳನ್ನು ಮೀರಿನಿಂತ ಅನ್ಯಾದೃಶ ಪ್ರೇಮದ ಸ್ಥಿತಿಯನ್ನೂ ಪ್ರತಿಪಾದಿಸುತ್ತಿದ್ದಾಳೆ. ಇಂಥ ನಿರಂತರ ಒಲುಮೆಯ ಸ್ಥಿತಿಯಲ್ಲಿ ಸಾವಿನ ಭಯವಿಲ್ಲ ಎನ್ನುವ ಅಕ್ಕನ ನಿಲುವು ನಿರ್ದಿಷ್ಟವಾದ ಸಾಮರಸ್ಯದ ಒಳಗಿನಿಂದ ಹುಟ್ಟಿ ಬಂದ ಅರಿವಾಗಿದೆ.

"ಅಕ್ಕನದು ಸಿದ್ಧ ವೈರಾಗ್ಯವಲ್ಲ ಸಿದ್ಧಿಸಿಕೊಂಡ ವೈರಾಗ್ಯ" ಎಂಬ ವಿಜಯಾ ದಬ್ಬೆಯವರ ನುಡಿ. ಈ ಬೆಳವಣಿಗೆ ದೃಷ್ಟಿಯಲ್ಲಿ ಅರ್ಥಪೂರ್ಣವಾಗಿದೆ.

ದೇಹ, ಮನಸ್ಸು, ಇಂದ್ರಿಯಗಳ ಸಹಚರ್ಯವನ್ನು ಸಾಧಿಸುತ್ತಲೇ ತನ್ನ ವ್ಯಕ್ತಿತ್ವದ ಔನ್ನತ್ಯಕ್ಕಾಗಿ ಪ್ರಯತ್ನಿಸುವ ವಿಶಿಷ್ಟ ಅನುಭಾವಿಕ ನೆಲೆಯಿಂದ ಅಕ್ಕಮಹಾದೇವಿಯು ಕಾಯಜೀವಗಳ ದ್ವಂದ್ವವನ್ನು ಮೀರಲೆತ್ನಿಸುವುದು ಕಂಡು ಬರುತ್ತದೆ.

ಲೌಕಿಕದ ವಾತಾವರಣದಲ್ಲಿ ಶರೀರದ ಬಗ್ಗೆ ಅತೀವ ನಿರಾಸಕ್ತಿ, ನಿರಾಕರಣೆ ತೋರುವ ಮಹಾದೇವಿಯಕ್ಕ ಅನುಭಾವದ ಆಶಯಗಳಲ್ಲಿ ದೇಹ – ಮನಸ್ಸುಗಳ ಬೆಸುಗೆಗೊಂಡಂತಹ ತನ್ನ ವ್ಯಕ್ತಿತ್ವವನ್ನು ಸಂಪೂರ್ಣವಾಗಿ ಬಿಚ್ಚಿಕೊಳ್ಳಲು ಯತ್ನಿಸುತ್ತಾಳೆ.

ತಾನು ಅನುಭವಿಸಬೇಕು ಎನ್ನುವವರೆಗೂ ಆ ಪದಾರ್ಥದ ಬಗೆಗಿನ ಆಸಕ್ತಿ, ಮಮಕಾರಗಳು, ಅಭಿಮಾನವೂ ಕಾಡುತ್ತದೆ. ಆದರೆ ಆ ಅನುಭವ ದಕ್ಕಿದ ನಂತರ ಇಂದ್ರಿಯ ಮೂಲದ ಅನುಭವಗಳು ಲೌಕಿಕ ಹಿತಾಸಕ್ತಿಗಳಷ್ಟೇ ಅಲ್ಲದೆ ಸ್ವತಃ ವ್ಯಕ್ತಿಯ ದೇಹದ ಬಗೆಗಿನ ಅಭಿಮಾನ, ಮಮಕಾರ ಕೂಡಾ ತೊರೆದು ಹೋಗುತ್ತದೆಂದು ಆಕೆ ಇಲ್ಲಿ ಸೂಚಿಸುತ್ತಾಳೆ.

ಅಕ್ಕನ ಜೀವನ ಹಾಗೂ ಅವಳು ನಡೆದು ಬಂದ ದಾರಿಯೇ ಒಂದು ಅಖಂಡ ಕಾವ್ಯವೆಂದು ಹೇಳಬಹುದು. ಅಂತೆಯೇ ಅಕ್ಕ ಅಖಂಡ ಸೌಭಾಗ್ಯವತಿ. ತಾನು ನಶಿಸಿಹೋದರೂ ತಾನು ನಂಬಿದ ಪತಿ ದೇವರು ಶಾಶ್ವತ. ತನ್ನ ದೇಹ ಲಿಂಗದಲ್ಲಿ ನಶಿಸಿ ಹೋದರೂ ತಾನೂ ಕೈಹಿಡಿದ ಪತಿ ಎಂದೆಂದಿಗೂ ದಿವ್ಯ ಚೇತನ ಎಂದು ನಂಬಿದ್ದವಳು. ತಾನು ಅಳಿಯಬೇಕು, ದೇವರು ಉಳಿಯಬೇಕು' – ಇದು ಕೇವಲ ಅಕ್ಕನ ಸಿದ್ದಾಂತವಾಗಿರದೆ, ಇಡೀ ಪ್ರಪಂಚದ ಸಿದ್ಧಾಂತ. ಆದರೆ ಮಾನವ ನಶ್ವರ. ಸೃಷ್ಟಿ ನಿರಂತರ ಎಂಬ ಸತ್ಯವನ್ನು ಅಕ್ಕ ತನ್ನ ಆಧ್ಯಾತ್ಮದ ಜೀವನದಿಂದ ಜಗತ್ತಿಗೆ ಸಾರಿ ಹೋಗಿದ್ದಾಳೆ. ಅವಳ ಚಿಂತನೆ ಇಂದಿಗೂ ಸತ್ಯವಾಗಿ ಉಳಿದು ಕಂಗೊಳಿಸುತ್ತದೆ.

* * *

ಅಕ್ಕಮಹಾದೇವಿ ೧೨ನೇ ಶತಮಾನದ ವಚನ ಸಾಹಿತ್ಯ ಪ್ರಕಾರದ ಪ್ರಮುಖ ಶರಣೆ ಎಂದು ಗುರುತಿಸಲ್ಪಟ್ಟಿದ್ದಾಳೆ. ಇನ್ನಿತರ ತನ್ನ ಸಮಕಾಲೀನ ಮಹಿಳೆಯರಿಗೆ ಹೋಲಿಸಿದರೆ, ಅಕ್ಕಮಹಾದೇವಿಯ ವಚನಗಳು ಮತ್ತು ಆಕೆಯ ಜೀವನದ ಬಗೆಗಿನ ಅಧ್ಯಯನಗಳು ಸಾಕಷ್ಟು ನಡೆದಿವೆಯೆಂಬುದನ್ನು ನಾವು ಗಮನಿಸಬಹುದು. ನವ್ಯದವರು ಅಕ್ಕನ ವಚನಗಳನ್ನು ಅತ್ಯುತ್ತಮ ಕಾವ್ಯ ಪ್ರಕಾರವೆಂದು ಚರ್ಚಿಸಿದ್ದಾರೆ, ಸಮಾಜಶಾಸ್ತ್ರಜ್ಞರು ಅಕ್ಕನನ್ನು ತಮ್ಮ ಅಧ್ಯಯನಗಳಲ್ಲಿ ವೈಧಿಕಶಾಹಿ ವಿರೋಧಿ ಧ್ವನಿಯಾಗಿ ಗುರುತಿಸಿದ್ದಾರೆ. ಸಾಂಪ್ರದಾಯಿಕ ಅಧ್ಯಯನಕಾರರು ವೀರಶೈವ ಧರ್ಮದ ಶಾಸ್ತ್ರೀಯ ಬುನಾದಿಯನ್ನು ರೂಪಿಸುವ ಹಿನ್ನೆಲೆಯಲ್ಲಿ ಆಕೆಯನ್ನು ಕಾಣಲು ಪ್ರಯತ್ನಿಸಿದ್ದಾರೆ. ಆಧುನಿಕ ಸ್ತ್ರೀವಾದಿ ಪರಂಪರೆಯ ಅಕ್ಕನಲ್ಲಿ ವ್ಯಕ್ತವಾಗುವ ಪ್ರೇಮದ, ಲೈಂಗಿಕ ಸಂಬಂಧಗಳು, ಸಾಂಪ್ರದಾಯಿಕ ಕೌಟುಂಬಿಕ ಚೌಕಟ್ಟಿನಾಚೆಗಿನ ಅಂಶಗಳ ಬಗ್ಗೆ ಅಕ್ಕನನ್ನು ಒಂದು ಹೆಣ್ಣು ಧ್ವನಿಯಾಗಿ ಗುರುತಿಸಿದ ಮಾತ್ರವಲ್ಲ, ಲಿಂಗ ತಾರತಮ್ಯ, ಕುಟುಂಬ ಲೈಂಗಿಕತೆ ಇತ್ಯಾದಿ ಬಂಡಾಯಗಾರ್ತಿಯೆಂದೂ ಗುರುತಿಸಿದ. ಹೀಗೆ ಅಕ್ಕನನ್ನು ತಮ್ಮ ತಮ್ಮ ನಿಲುವಿಗನುಗುಣವಾಗಿ ಒಪ್ಪಿಸಿಕೊಳ್ಳುವ ಪ್ರಯತ್ನ ಕನ್ನಡದಲ್ಲಿ ನಡೆದಿದೆ. ಅಕ್ಕನ ಕುಟುಂಬ, ಲೈಂಗಿಕ ಪ್ರಶ್ನೆಗಳನ್ನು ಒಪ್ಪುತ್ತಲೇ ಆಕೆಯನ್ನು ಬಂಡಾಯಗಾರ್ತಿ ಎಂದು ಗ್ರಹಿಸಲು ಸಾಧ್ಯವಿಲ್ಲವೆಂಬುದು ನನ್ನವಾದ. ಭವ ಸಂಸಾರದಲ್ಲಿ ಸಾಮಾಜಿಕ ರಚನೆಗಳ ಬಗ್ಗೆ ಅಕ್ಕನಿಗಿದ್ದ ಅಸಮಾಧಾನ, ವಿರೋಧಗಳೆಲ್ಲಾ ಪ್ರಾಮಾಣಿಕವಾದವು. ಆದರೆ 'ಭಾವ ಹಾಗೂ ಅಭಿವ್ಯಕ್ತಿ ಪ್ರೇಮ ಹಾಗೂ ಲೈಂಗಿಕ ಸಂಬಂಧಗಳ' ಬಗ್ಗೆ ಕಟ್ಟಿಕೊಂಡಿದ್ದ ನಂಬಿಕೆಗಳ ವಿರುದ್ಧ ತಿರಸ್ಕಾರವನ್ನು ಆಕೆ ಏಕಪ್ರಕಾರವಾಗಿ ಸೂಚಿಸಿಲ್ಲ. ಕುಟುಂಬ ರಚನೆಯ ಪರಂಪರಾನುಗತ ಸ್ವರೂಪಕ್ಕೆ ಕಾರಣವಾದಂತಹ ಎಲ್ಲಾ ವ್ಯಕ್ತಿಗತ ಸಂಬಂಧಗಳನ್ನು ತಿರಸ್ಕರಿಸಿಲ್ಲ ಎಂಬುದು ನನ್ನ ವಾದ. ಇದು ಅಕ್ಕನ ವ್ಯಕ್ತಿ ಮಿತಿಯೇ ಅಥವಾ ಆಗಿನ ಸಾಮಾಜಿಕ ಸಂದರ್ಭದ ಮಿತಿಯೇ ಅಥವಾ ಅದು ಪ್ರಗತಿಪರವೇ ಅಲ್ಲವೇ ಮಹಿಳೆಯರ ಪರವೇ ಅಲ್ಲವೇ ಎಂಬುದು ನನ್ನ ವಾದವಲ್ಲ. ಅಕ್ಕನ ವಚನಗಳ ಮೂಲಕ ನಮಗೆ ದಕ್ಕುವ ಲಿಂಗ ಲೈಂಗಿಕತೆ, ಕೌಟುಂಬಿಕ ಸಂಬಂಧಗಳು ಬೇರೆಯದೇ ಆದ ಸ್ತರದಲ್ಲಿ ಪುನರ್ ಪರಿಶೀಲನೆ ಮಾಡಲು ಅಕ್ಕ ಪ್ರಸ್ತಾಪಿಸಿರುವಂತೆ ಕಾಣುತ್ತದೆ. ಅಕ್ಕನ ವಚನಗಳಲ್ಲಿನ ಸಂಕೀರ್ಣತೆಯಿಂದಾಗಿ ಒದಗಿರುವ ಹಲವಾರು ವಿಪರ್ಯಾಸ ತೊಡಕು ದ್ವಂದ್ವಗಳಲ್ಲಿ ಸಿಲುಕಲೇಬೇಕಾದ ಅನಿವಾರ್ಯತೆಯನ್ನು ಸೂಚಿಸುತ್ತದೆ.

ಆಧುನಿಕ ಲೇಖಕಿಯರು ಅಕ್ಕನನ್ನು ಕುರಿತು ಅಕ್ಕ ಉಡುತಡಿಯಲ್ಲಿ ಉದ್ಭವಿಸಿ, ಕಲ್ಯಾಣದಲ್ಲಿ ಕವಲೊಡೆದು ಕನ್ನಡ ನಾಡಿನ ಹೊಲಮೇರೆಯನ್ನೆಲ್ಲಾ ಕ್ಷಣಾರ್ಧದಲ್ಲಿ ಪಳಚ್ಚನೆ ಪ್ರಜ್ವಲಿಸುವಂತೆ ಮಾಡಿ ಶ್ರೀಶೈಲದ ಕದಳಿಯಲ್ಲಿ ಕಣ್ಮರೆಯಾದ ಅಕ್ಕಮಹಾದೇವಿಯ ದಿವ್ಯಾತ್ಮದ ಸೆಳೆ ಮಿಂಚಿನ ಹೆಜ್ಜೆ ಗುರುತುಗಳನ್ನು ಕಂಡುಕೊಂಡು ಆ ಜ್ಯೋತಿ ಮಾರ್ಗದಲ್ಲಿ ಅಡಿಯಿಡುವ ಪ್ರಜ್ಞೆಯನ್ನು, ನಿಷ್ಠೆಯನ್ನು ಕರ್ನಾಟಕ ಜನಪದ ಪಡೆಯಬೇಕು. ಮಹಾದೇವಿಯಕ್ಕ ಕನ್ನಡ ನಾಡಿನ ಮಹಾಶಿವಶರಣೆ, ಮೊದಲ ಕವಯಿತ್ರಿ, ವೀರ ರಾಗಿಣಿ, ಅವಳ ಅನುಭವದ ಆಳದಿಂದ

ಹೊರಹೊಮ್ಮಿದ ವಚನಗಳು ಉತ್ತಮ ಕಾವ್ಯಾಂಶದಿಂದ ತುಂಬಿ ತುಳುಕುತ್ತಿವೆ. ಅವಳ ಚರಿತ್ರೆಯಂತೂ ಆದರ್ಶಪ್ರಾಯವಾಗಿದೆ. ಜಾಗತಿಕ ಮಹಿಳಾವಾಣಿಗಳಲ್ಲಿ ಅತ್ಯಂತ ಹಿರಿಯಸ್ಥಾನ ಆಕೆಯದು. ಅನುಭವಿ ಅಕ್ಕಮಹಾದೇವಿಯ ವಿಶ್ವವ್ಯಾಪಕ ವ್ಯಕ್ತಿತ್ವ ಆಕಾಶದಂತೆ ಅಪರಂಪಾರವಾದುದು, ಸಾಗರದಂತೆ ನಿಗೂಢವಾದುದು. ಅರಿತಷ್ಟು ಅರ್ಥವ್ಯಾಪ್ತಿಯನ್ನು ಹಿಗ್ಗಿಸಿಕೊಳ್ಳುತ್ತಾ ಹೋಗುವ ದರ್ಶನವೈಭವವುಳ್ಳದ್ದು.

ಕರುನಾಡ ಕಾಸಾರದಲ್ಲಿ ತಿಳಿಬಾಳಿನ ತಾವರೆಯಾಗಿ, ಆಧ್ಯಾತ್ಮದ ಅರವಿಂದನಾಗಿ, ಅರಳಿದಳಾಕೆ, ಸುತ್ತ ಸೌರಭವನ್ನು ಬೀರಿ ತಾವರೆಯಷ್ಟೇ ನಿರ್ಮಲವಾದ ಪರಿಶುದ್ಧವಾದ ಬಾಳನ್ನು ಬಾಳ ಬಯಲಾದಳು. ಸ್ವಾನುಭವದ ಉದಯದಿಂದ ತನ್ನ ತಾನರಿಯ ನಿಜಶಕ್ತಿಯಾದಳಾಕೆ. ಮಹಾದೇವಿಯಕ್ಕನ ಜೀವನ ಚರಿತ್ರೆ ಹೆಣ್ಣಿನ ಗೌರವ ಸಾಧನೆಯ, ಹೆಣ್ಣಿನ ಸ್ವಾತಂತ್ರ್ಯ ಸಾಧನೆಯ, ಹೆಣ್ಣಿನ ಪರಮಾರ್ಥ ಸಾಧನೆಯ ಒಂದು ಮಹಾಪ್ರಸರಣ. ಅಕ್ಕಮಹಾದೇವಿ ತನ್ನ ಜೀವಿತ ಕಾಲದಲ್ಲಿ ಎಷ್ಟು ಪ್ರಭಾವ ಬೀರಿದ್ದಳೋ ಅದಕ್ಕೂ ಹೆಚ್ಚಿನ ಪ್ರಭಾವವನ್ನು ಅನಂತರದ ದಶಕಗಳಲ್ಲಿ ಬೀರಿರುವುದನ್ನು ಕಾಣಬಹುದು. ಭಾರತದ ಇತಿಹಾಸದಲ್ಲಿಯೇ ಓರ್ವ ಮಹಿಳಾ ವಚನಕಾರ್ತಿ ವೈರಾಗ್ಯನಿಧಿಗೆ ನುಡಿ ನಮನಗಳು ಹಲವಾರು ಲೆಕ್ಕವಿಲ್ಲದಷ್ಟು. ಅವುಗಳಲ್ಲಿ ಅಕ್ಕನ ಜೀವನವನ್ನು ಚಿತ್ರಿಸುವಲ್ಲಿ ಸಹಕಾರಿಯಾಗಿರುವುದು ಹಾಗೂ ಅಕ್ಕಮಹಾದೇವಿಯನ್ನು ನೇರವಾಗಿ ಕುರಿತು ಕಾವ್ಯ – ರಗಳೆ, ಸಾಂಗತ್ಯಗಳು ಬಲದಿಂದ ಎಲ್ಲವನ್ನೂ ಎದುರಿಸಿ, ತನ್ನ ಗುರಿಯನ್ನು ಸಾಧಿಸಿದ ಧೀಮಂತ ಮಹಿಳೆ ಅಕ್ಕ. ಮಹಿಳೆಯರ ಸಮಾನತೆಯ ಬಗ್ಗೆ ಹೋರಾಟ ಮಾಡಿದ ಪ್ರಥಮ ಪಾಠ ಹೇಳಿದ ಗುರು ಅಕ್ಕಮಹಾದೇವಿ. ಪುರುಷರಿಗೆ ಸಮಾನಾ ವಚನ ರಚಿಸಿ ತೋರಿದುದು. ಈ ನಾಡಿನ ಹೆಮ್ಮೆ ಜಗತ್ತಿಗೆ ೧೨ನೆಯ ಶತಮಾನವಿತ್ತ ಕೊಡುಗೆ. ಸ್ತ್ರೀಯರಲ್ಲಿ ಮೊದಲಿಗೆ ಬರುವ ಹೆಸರೆಂದರೆ ಅಕ್ಕಮಹಾದೇವಿಯದು. ಸೌಂದರ್ಯದ ಖಣಿಯಾದ ಈಕೆ ಗುಣದ ಗಣಿಯಾಗಿದ್ದಳು. ಚಿಕ್ಕಂದಿನಿಂದಲೇ ಓರಗೆಯ ಗೆಳತಿಯರೊಡನೆ ಬೆರೆಯದೆ ಏಕಾಂಗಿಯಾಗಿ ತನ್ನದೇ ಆದ ಭಾವನಾ ಲೋಕದಲ್ಲಿ ವಿಹರಿಸುತ್ತಿದ್ದಳು. ವೈರಾಗ್ಯದ ದಿವ್ಯಜ್ಞಾನದ ನಿಜ ಸ್ವರೂಪವೇ ಮಹಾದೇವಿಯೆಂಬ ಹೆಣ್ಣಾಗಿ ಪ್ರಕಾಶವನ್ನು ಪ್ರಜ್ವಲಿಸುತ್ತಿದೆ ಎನ್ನುವವರು ಹಲಕೆಲವರು. ಈ ಲೋಕದ ಜನರ ತೆಗಳಿಕೆಗೆ ಮನ ನೋಯದೆ ಹೊಗಳಿಕೆಗೆ ಮನ ಹಿಗ್ಗದೆ ಸಾಗುತ್ತಿದ್ದಳು. ಹದಿಹರೆಯದ ಯೌವ್ವನೆ ಹೆಣ್ಣೊಬ್ಬಳೇ ದಿಗಂಬರೆಯಾಗಿ ಹೋಗುವುದು, ತಂದೆ – ತಾಯಿಗಳಿಗೆ, ಬಂಧು – ಬಾಂಧವರಿಗೆ ಗೆಳತಿಯರಿಗೆ ಮನ ನೋಯುವಂತಾಗಿತ್ತು. ನಿನಗಾಗಿ ಅಲ್ಲದಿದ್ದರೂ, ಸಮಾಜಕ್ಕಾಗಿ, ಸಮಾಜದ ಜನರಿಗಾಗಿ, ಉಡುಗೆಯನ್ನು ಧರಿಸಿಕೊಳ್ಳೆಂದು ಅರುಹಿದರು. ಒಲುಮೆ ನೆಲೆಗೊಂಡಲ್ಲಿ ಕುಲಛಲಕ್ಕೆ ಬೆಲೆ ಕೊಡುವುದಿಲ್ಲ. ಮರುಳು ಗೊಂಡು ಮನ ಒಲಿದವರು ಲಜ್ಜೆ ನಾಚಿಕೆಗಳನ್ನು ತೋರುವುದಿಲ್ಲ. ಆ ದೇವನಿಗೊಲಿದ ಎನಗೆ ಲೋಕದ ಜನತೆಯ ಮಾತಿಗಾಗಲಿ, ಲೋಕಾಭಿಮಾನದ ಹಂಗು ನನಗಿಲ್ಲ. ಶರಣರೊಡ್ಡಿದ ಅಗ್ನಿ ಪರೀಕ್ಷೆಯಲ್ಲಿ ಗೆದ್ದು, ಅನುಭವ

ಮಂಟಪದಲ್ಲಿ ವಿಶಿಷ್ಟ ಸ್ಥಾನ ಪಡೆಯುತ್ತಾಳೆ. ಅಕ್ಕಮಹಾದೇವಿ ಆಧ್ಯಾತ್ಮದ ಮೇರುವೆಂದು ವರ್ಣಿಸುತ್ತಾರೆ. ಅನೇಕ ಲೇಖಕಿಯರು ಅಂತಹ ದಿಟ್ಟ ಗಟ್ಟಿ ನಿಲುವು ತೋರಿದ ಅಕ್ಕನ ವಚನಗಳು ಎಷ್ಟೊಂದು ಶ್ರೇಷ್ಠವೆಂದರೆ ಅದಕ್ಕೆ ಮೇಲಿನ ವಚನವೇ ಸಾಕ್ಷಿಯಲ್ಲದೆ. ಲೌಕಿಕರ ನಿಂದನೆಗಳಿಗೆ ಗುರಿಯಾದ ಈಕೆ ಧೈರ್ಯದಿಂದ ಅವುಗಳನ್ನೆಲ್ಲಾ ಎದುರಿಸಿ ನಿಂತಿದ್ದು, ಇಂದಿಗೂ ಸೋಜಿಗ. ಬೆಟ್ಟದಾ ಮೇಲೊಂದು ಮನೆಯ ಮಾಡಿ ಮೃಗಗಳಿಗಂಜಿದೊಡೆಂತಯ್ಯಾ' ಎಂದು ಸಮಾಧಾನದಿಂದ ಸಹಿಸಿ ಧೃತಿಗೆಡದೆ ನಡೆದದ್ದು, ಇಡೀ ಮಹಿಳಾ ಲೋಕಕ್ಕೆ ಮಾದರಿ ಎನಿಸುತ್ತದೆ. ನಾನು ವೈರಾಗ್ಯ ತಾಳಿದರೂ 'ಬಿಲ್ವ – ಬೆಳವಲ ಕಾಯಿಗಳನ್ನು ಏಕಕಾಲಕ್ಕೆ ಹಿಡಿಯಲಾಗುವುದಿಲ್ಲ'ವೆಂಬ ವಚನ ಹೆಣ್ಣು ಮಾಯೆಯಂತಾದರೆ, ಗಂಡೂ ಮಾಯೆಯಾದೀತೆಂದೂ ದೇಹದೊಳಿರುವ ಆತ್ಮ ಹೆಣ್ಣು ಅಲ್ಲ. ಗಂಡೂ ಅಲ್ಲವೆಂಬ ನಿಲುವು, ಸಾವಿಲ್ಲದ, ಕೇಡಿಲ್ಲದ, ರೂಹಿಲ್ಲದ ಗಂಡನೊಲು ಒಲವು ತಾಳಿದ ಅಕ್ಕ, ಅತ್ಯಂತ ಎತ್ತರದ ಸ್ಥಾನದಲ್ಲಿ ನಿಲ್ಲುತ್ತಾಳೆ.

ಅಕ್ಕನಲ್ಲಿ ವಿಶಿಷ್ಟವಾಗಿರುವ ಕಾಯದ ಕಲ್ಪನೆಯ ಬಗ್ಗೆ ಹಲವಾರು ಕಡೆ ಚರ್ಚಿಸಲಾಗಿದೆ. ಅಕ್ಕನಲ್ಲಿ ಏಕಕಾಲಕ್ಕೆ ಶರೀರದ ಶೃಂಗಾರ ಸಾಧ್ಯತೆಗಳು, ಇನ್ನೊಂದು ಕಡೆ ಶರೀರವನ್ನು ತುಚ್ಛೀಕರಿಸಿ ಕಡೆಗಣಿಸುವ ಪ್ರತಿಮೆಗಳು ಗಣನೀಯ ಪ್ರಮಾಣದಲ್ಲಿದೆ. ಅಕ್ಕನಲ್ಲಿ ಕಾಯದ ಕಲ್ಪನೆ ಎಷ್ಟರಮಟ್ಟಿಗೆ ವಿಸ್ತೃತವಾಗಿದೆ ಎಂದರೆ ನಮಗೆ ಒಟ್ಟಿಗೆ ಸ್ವೀಕಾರ ಮತ್ತು ತಿರಸ್ಕಾರವನ್ನು ಬಿಂಬಿಸುವ ವಚನಗಳು ಸಿಗುತ್ತವೆ. ಅಕ್ಕ ಸಾಮಾನ್ಯವಾಗಿ ಕಂಡು ಬರುವ ಕಾಯದ ಕಲ್ಪನೆಯನ್ನು ಕೂಡ, ನಾವು ದೇವರನ್ನು ಹೊಂದಲು ಬೇಕಾಗುವ ಪೂರ್ವ ಸಿದ್ಧತೆಯ ಸಾಧನವಾಗಿ ಪರಿಗಣಿಸಿರುವುದನ್ನು ಕಾಣುತ್ತೇವೆ. ಅಕ್ಕನಲ್ಲಿ ದೇಹ ಒಂದೇ ಕಾಲಕ್ಕೆ ಪ್ರಕೃತಿಯ ಭಾಗವೂ ಹೌದು, ಸಂಸ್ಕೃತಿ ಮತ್ತು ಸಮಾಜದ ಭಾಗವೂ ಹೌದು. ಅಕ್ಕನಲ್ಲಿ ಈ ಪರಸ್ಪರ ಕ್ರಿಯೆ ತುಂಬಾ ಕುತೂಹಲ ಮೂಡಿಸುವಂತಹದ್ದಾಗಿದೆ. ಹೀಗಾಗಿ ಅಕ್ಕ ಸದ್ಯದ ಸಂದರ್ಭಗಳಿಗೂ ಪ್ರಸ್ತುತಳಾಗುತ್ತಾಳೆ. ಇಂತಹ ಸನ್ನಿವೇಶದಲ್ಲಿ ಉಡುಗೆ – ತೊಡುಗೆ, ವೇಷಭೂಷಣದ ಬಗ್ಗೆ ಹೊಸ ಆಯಾಮವನ್ನು ಅಕ್ಕನಲ್ಲಿ ಕಾಣಲು ಸಾಧ್ಯ. ಉಡುಗೆಯು ಆಳವಾಗಿ ನಮ್ಮ ದೇಹದ ಮತ್ತು ಆಚರಣೆಯ ಒಂದು ಭಾಗವಾಗಿ ದಿನನಿತ್ಯದ ರೂಢಿಯೊಳಗೆ ಹೊಸಹೊಕ್ಕಾಗಿರುವುದು ಆಕೆಯ ಕಾಯದ ಕಲ್ಪನೆ. ಅದರಲ್ಲೂ ವೇಷಭೂಷಣಗಳಿಂದ ದೊರಕುವ ಕಾಯದ ಚಿತ್ರಣವನ್ನು ಹಿನ್ನೆಲೆಯಾಗಿಟ್ಟುಕೊಂಡು ಚರ್ಚಿಸುವ ಪ್ರಯತ್ನವನ್ನು ಇಲ್ಲಿ ಮಾಡಬಹುದು.

ಮಾನವ ಅಸ್ತಿತ್ವದ ಪೂರ್ಣ ಸ್ವರೂಪವನ್ನು ಗ್ರಹಿಸುವ ಅಕ್ಕಮಹಾದೇವಿಯ ಧೋರಣೆ – ನಿಲುವುಗಳು ಇಂಥ ಧಾರೆಯಿಂದಲೇ ಹುಟ್ಟಿಕೊಳ್ಳುತ್ತವೆ. ಎಂಬುದು ವಿಶೇಷ ಮತ್ತು ಆಶ್ಚರ್ಯ ತೀರ ವೈಯಕ್ತಿಕವಾದ, ಆಳವಾದ ತಳಮಳ, ತಲ್ಲಣ ಹಾಗೂ ಉನ್ನತವಾದ ಕನಸುಗಳ ಶೈಲಿಯಲ್ಲಿ ಅಭಿವ್ಯಕ್ತಗೊಳ್ಳುವ ಇವಳ ವಚನಗಳು ಪಾರಮಾರ್ಥಿಕ ಪ್ರೇಮದ ಹಾಗೂ ಚೆಲುವಿನ ತಣ್ಣನೆಯ ಪರಿಸರದಲ್ಲಿ ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳಬೇಕೆಂಬ ಹಂಬಲವನ್ನೂ ಪ್ರಕಟಿಸುತ್ತವೆ.

ಇತರ ವಚನಗಾರರಿಗಿಂತಲೂ ಅತ್ಯಂತ ವೈಯಕ್ತಿಕ. ಎನ್ನುವ ತೀವ್ರತೆಯಲ್ಲಿ ಸೃಜನಗೊಂಡು ಜೀವಂತಗೊಳ್ಳುವ ಇವಳ ವಚನಗಳ ಅಂತರಂಗದ ಸ್ವರೂಪ ಬಸವಣ್ಣನ ವಚನಗಳ ಆಂತರಂಗಿಕ ಸ್ವರೂಪಕ್ಕಿಂತಲೂ ತೀರ ಭಿನ್ನವಾದ ಆಕಾರವನ್ನು ಪಡೆದಿವೆ. ಅಕ್ಕನ ವಚನಗಳು ಹೆಚ್ಚಾಗಿ ಆಪ್ತವಾಗಿ, ಪ್ರಖರವಾಗಿ ನಿರರೂಪಿಸುತ್ತವೆ. ಆದ್ದರಿಂದಲೇ ಅಕ್ಕನ ಯಾವ ವಚನವೂ ಭಾವಕ್ಕಿಂತ ಗುಣದ ಲಯ, ಧಾಟಿ, ಮಾಧುರ್ಯ, ಮಾರ್ಮಿಕ ಸೌಲಭ್ಯವನ್ನು ಗಳಿಸಿ, ವಸ್ತು ಪ್ರತಿರೂಪವನ್ನು ಪ್ರತಿಮಿಸಿ ಕೊಡುತ್ತವೆ.

ವಚನಗಳ ಪ್ರಾಣಸ್ವರೂಪ ಹಾಗೂ ಅದರ ಪರಿಸರವನ್ನು ಪರಿಶೀಲಿಸಿ ಮುಂದೆ ನಿಜ ನಿರ್ಮಿತಿಯ ಸವಾಲುಗಳನ್ನು ಸೂಕ್ಷ್ಮ ಸಮಾಲೋಚನೆಗೆ ಸಾರ್ಥಕಗೊಳಿಸುವುದು ಸರಿ. ಕೆಲವೊಂದು ಸನ್ನಿವೇಶದಲ್ಲಿ ಅಕ್ಕಮಹಾದೇವಿ ಎದುರಿಸಿದ ಲೌಕಿಕ ವಿಪತ್ತುಗಳು ಎಡೆಬಿಡದೆ ಅವಳನ್ನು ಕಾಡಿದ ವಿಪರ್ಯಾಸಗಳು ಅಗಣಿತವೆಂದೇ ಹೇಳಬೇಕು. ಇಂಥ ನೂರೆಂಟು ಲೌಕಿಕ ವಿಪತ್ತುಗಳನ್ನು ಮೀರಿಯೂ ಮೇರುವಿನೆತ್ತರಕ್ಕೆ ಅನುಭಾವದ ಸುಗಂಧವನ್ನು ಸೂಸಬೇಕೆನ್ನುವ ಛಲ, ಹಟ, ಕಠಿಣವಾದ ಅವಳ ನಿರ್ಮಲ ವೈರಾಗ್ಯ ಯಾವ ನಿಲುಮೆಗೂ ಸಮನಲ್ಲ. ಹುಟ್ಟು ವಿರಾಗಿಣಿಯಾದ ಈ ಅಕ್ಕ ಸೌಂದರ್ಯಕ್ಕೆ ಚೆಲುವಿಗೆ ಯಾರಿಗೂ ಸರಿಸಾಟಿಯಲ್ಲದವಳೂ ಕೂಡ.

೧೬ ತುಂಬಿದ ಆಕೆಯ ಹರೆಯದ ಜವ್ವನ ಯಾರನ್ನೂ ಬೆರಗುಗೊಳಿಸುವಂತದ್ದು ಆಕೆಯ ಚೆಲ್ವಿಕೆ, ಶೃಂಗಾರದ ಶರಧಿಯೇ ಆದ ಅಕ್ಕಮಹಾದೇವಿಯೆ ಸೌಂದರ್ಯ ಸಂಪತ್ತು ಅಗಾಧವಾದುದೆಂದೂ, ಆಕರ್ಷಿಸುವ ಶೃಂಗಾರದ ಈ ಬಾಹ್ಯ ಮುದ್ರೆಗಳು ಆಕೆಯ ಮನದಾಳವನ್ನು ಕಿಂಚಿತ್ತೂ ಬಾಧಿಸಲಿಲ್ಲವೆಂದೂ, ಯೌವ್ವನದ ಪ್ರಸೂನ ಇನ್ನೂ ಅರಳಿದಂತೆಲ್ಲಾ ಅವಳ ಮನಸ್ಸಿನಲ್ಲಿ ಪರಮಾತ್ಮನ ವಿಷಯಕ ಭಕ್ತಿ – ಭಾವ, ಉದ್ದೀಪನಗೊಳ್ಳುತ್ತ ನಡೆಯಿತೆಂದೂ, ಸಾಮಾನ್ಯರಂತೆ ಯೌವ್ವನದ ವಿಕಾರಗಳು, ವಿಕೃತಿಗಳು ಅಕ್ಕನನ್ನು ಕಲಕಲಿಲ್ಲವೆಂದೂ ಇತ್ಯಾದಿಯಾಗಿ ಇನ್ನೂ ಮುಂದುವರೆದು ನಮ್ಮ ಮಹಿಳಾ ಮಣಿಗಳು ಮೈದುಂಬಿ ಭಾವುಕವಾಗಿ ವಿವರಿಸಿದ್ದಾರೆ.

ಇಂಥ ಶೃಂಗಾರ ಸಂಪನ್ನೆಯಾದ ಅಕ್ಕನ ಯೌವ್ವನ ತುಂಬಿದ ಭಾವಸಮುದ್ರ ಅನುಭಾವದ ವಿರಹಕ್ಕೆ ತಿರುಗಿ, ಲೌಕಿಕ ಚೆಲುವನ್ನೇ ಗೌಣವಾಗಿಸಿಬಿಡುತ್ತಾದರೂ, ಕಣ್ಣೆದುರಿನ ಸಮಾಜ, ಪರಿಸರ ಆಕೆಯ ಕಣ್ಮನ ಇರಿಯುವ ಚೆಲುವಿಕೆಯನ್ನು ಅಷ್ಟು ಸಹಜ, ಸರಳವಾಗಿ ಆಧ್ಯಾತ್ಮಿಕ ರಸ – ಭಾವಗಳಿಂದ ಸ್ವೀಕರಿಸುವುದಿಲ್ಲ. ಹೀಗೆ ಒಂದು ಕಡೆ ಅನುಭಾವಿಕ ದಿಟ್ಟ, ಇನ್ನೊಂದೆಡೆ ಲೌಕಿಕ ಕಾಮನ ಉಕ್ಕಂದವನ್ನು ಬಹಳ ಗಂಭೀರವಾಗಿಯೇ ಅಕ್ಕ ಎದುರಿಸುವಂತಾದದ್ದು ಎಷ್ಟೊಂದು ಘರ್ಷಣಾತ್ಮಕವಾದ ಸವಾಲು ಎಂಬುದನ್ನು ಇಲ್ಲಿ ವಿಶ್ಲೇಷಣೆಯಲ್ಲಿ ನಿರೂಪಿಸಬಹುದು. ಇದು ಘಟಿಸಿದುದು, ಅಕ್ಕ ಉಡುತಡಿಯಿಂದ ಅನುಭಾವದ ಅಮೃತವನ್ನು ಬೆನ್ನಟ್ಟಿ ಕಲ್ಯಾಣದ ಮಹಾದ್ವಾರದಲ್ಲಿಯೇ ಅದರ ಭವ್ಯತೆಯನ್ನು ಕಂಡು ಹರುಷದ ಒಡಲಿನಿಂದ ಬಾಗಿ ಕಲ್ಯಾಣದ ಮಹತಿಯನ್ನೂ, ಶರಣರ ಮಹಿಮೆಯನ್ನೂ ಅನವರತವಾಗಿ

ಕೊಂಡಾಡುವುದು ಈ ಕನಸಿನ ಕಲ್ಯಾಣದಲ್ಲಿ ಅಕ್ಕನು ಅಲ್ಲಮ, ಬಸವಾದಿಗಳ ಅಗಮ್ಯ ಪ್ರೀತಿಗೆ, ಪ್ರತಿಭಾ ಸ್ಫುರಣಕ್ಕೆ ಪಾತ್ರವಾದಳು.

ಸ್ತ್ರೀ ಸ್ವಾತಂತ್ರ್ಯವನ್ನು ತಂದುಕೊಟ್ಟದ್ದು ವಚನಯುಗ, ಆಧ್ಯಾತ್ಮಿಕ ಸಾಧನೆಯ ವಲಯದಲ್ಲಿದ ಹೆಣ್ಣು ಗಂಡಿನ ನಡುವೆ ಯಾವ ತಾರತಮ್ಯಗಳೂ ಇಲ್ಲವೆಂದು ವಚನ ಚಳುವಳಿ ಪ್ರತಿಪಾದಿಸಿತಾದರೂ ಐಹಿಕ ನೆಲೆಯಲ್ಲಿ ಸ್ತ್ರೀ ಪುರುಷರ ನಡುವಿನ ಸಮಾನತೆಯನ್ನು ಒಪ್ಪಿ ಆ ದಿಕ್ಕಿನಲ್ಲಿ ಮೂಲಭೂತ ಬದಲವಣೆ ಚಳುವಳಿಯ ಮುಖ್ಯ ಉದ್ದೇಶ ಇದಕ್ಕಿದ್ದಿತಾದರೂ ಆಗಬೇಕಾದಷ್ಟು ಪರಿಣಾಮವಾಗದೇ ಹೋಯಿತು. ಆಧ್ಯಾತ್ಮಿಕ ಸಾಧನೆಗೆ ಅವಕಾಶ ಹಾಗೂ ಆಲಯದ ಸಮಾನತೆಯನ್ನು ಒಪ್ಪಿದ ತಾತ್ವಿಕ ನೆಲೆ ಮಹಿಳೆಯರ ಐಹಿಕನೆಲೆಯ ಪ್ರತಿಭಟನೆಯನ್ನು ಬೆಂಬಲಿಸಿದುದಕ್ಕೆ ಮಹಾದೇವಿಯಕ್ಕನ ಜೀವನ ಒಂದು ಮಹತ್ವದ ನಿದರ್ಶನ. ಆದರೆ ಅವಳ ಮೌಲ್ಯವಾಗಿ ಮಾತ್ರ ಪ್ರತಿಭಟನೆಯನ್ನು ಈ ಹಂತ ಸ್ವೀಕರಿಸಿದೆ. ಲೋಕದ ಗಂಡರನ್ನು ಒಲೆಯೊಳಗಿಕ್ಕು ಎಂದ ಅಕ್ಕಮಹಾದೇವಿ ಮಾಡಿದ್ದು, ಆ ಲೋಕದ ಗಂಡನನ್ನುದ ಅದೂ ನಿನ್ನ ಬರೆವೆನ್ನಸುವಿನ ಬರವು ಬಾರಯ್ಯಾ' ಎಂಬ ಧೋರಣೆಯಿಂದ, ಸಮರ್ಪಣೆಯಿಂದ ಈ ಪ್ರತಿಭಟನೆಗೆ ಮೌಲಿಕತೆ ಬಂದಿದೆ. ಹಾಗೂ ಸಮರ್ಪಣೆಗಾಗಿಯೇ ಪ್ರತಿಭಟನೆ ನಡೆದಿದೆ. ಅಂದಿನ ಕಾಲದ ವಿಧವಾ ಜೀವನ ಒಂದು ಸಮಸ್ಯಾತ್ಮಕ ಅಧ್ಯಯನವೆನಿಸಿದೆ. ಸಮಾಜ ಮತ್ತು ಸಂಪ್ರದಾಯದ ಹಿಡಿತದಿಂದ ಜನಸಾಮಾನ್ಯರಾಗಲಿ, ಪುರೋಹಿತ, ಅಧಿಕಾರವರ್ಗವಾಗಲಿ ವಿಧವಾವಿವಾಹ ಪ್ರತಿಪಾದನೆ ಮಾಡುವಷ್ಟು ಚತುರರಾಗಿರಲಿಲ್ಲ. ಅದೇ ವಿಧವೆಯರು ಧಾರ್ಮಿಕ ಕಾರ್ಯಕಲಾಪಗಳಲ್ಲಿ ರಾಜ್ಯಾಡಳಿತದಂತಹ ಗಂಭೀರ ಸಂದರ್ಭದಲ್ಲಿ ಭಾಗವಹಿಸಿ ತಮ್ಮ ಸೇವೆ ಸಮರ್ಪಿಸಿರುವರು.

ಭಕ್ತಿ ಜ್ಞಾನಕ್ಕೆ ಸಾಕಾರ ಸ್ವರೂಪ ಕಲ್ಪಿಸಿದ ಶಿವಾನುಭವ ಗೋಷ್ಠಿಯ ಅನುಭಾವ ಗೋಷ್ಠಿಯಲ್ಲಿ ತನ್ನ ನಿಜದನಿಯ ನುಡಿಗಡಣವನ್ನು ಅಕ್ಕ ಭಕ್ತಸಾಗರ ಸಮ್ಮುಖದಲ್ಲಿ ಸಮರ್ಪಿಸಿದಳು. ಇಲ್ಲಿ ನೈಜವೆನಿಸುವುದು. ಸಕಾರಣವೆನ್ನಿಸುವುದು ಅಕ್ಕ ಬಾವುಕಗಳಾಗಿ ತನ್ನ ಪೂರ್ಣವಿಚಾರ ಸ್ವಾತಂತ್ರ್ಯವನ್ನು ಕಂಡುಕೊಂಡವಳಲ್ಲ ಎನ್ನುವುದು ತನ್ನ ಖಚಿತವಾದ ಮಾತುಗಳಿಂದ ಹೇಳುತ್ತಲೇ, ಕ್ಷಣ ಬಾವುಕಗಳಾಗಿ ಮೈಮರೆತು ಹಾಡಿಕೊಳ್ಳುತ್ತಲೇ, ಭಕ್ತನ ವೇಷ ಹೊತ್ತ ಭವಿಗಳ ಬಗ್ಗೆ ಬಾರದ ಭವದಲ್ಲಿ ವ್ಯರ್ಥ ಸೋರಿ ಹೋಗುವ ಡಾಂಭಿಕ ಭಕ್ತರ ಬಗ್ಗೆ ಎಳ್ಳಷ್ಟು ನಾಚದೆ, ಅಳುಕದೇ ಧೀರತನದಿಂದ ಎತ್ತುವ ಪ್ರಶ್ನೆಗಳು ಹಾಗೂ ಅಲೌಕಿಕ ಲೈಂಗಿಕ ಪರಿಭಾಷೆಯ ಸಂವೇದನೆಗಳು – ಅಕ್ಕನ ವ್ಯಕ್ತಿತ್ವಕ್ಕೆ ಸಾಣೆ ಹಿಡಿದ ಚಿನ್ನವೇ.

ದೇಹ ಹಾಗೂ ಮನಸ್ಸುಗಳ ಇಮ್ಮುಖ ಸ್ಥಿತಿಯನ್ನು ಅಕ್ಕನ ವ್ಯಕ್ತಿತ್ವಕ್ಕೆ ಸಂಬಂಧಿಸಿದ ಪ್ರಮುಖ ದ್ವಂದ್ವವೊಂದು ಒಡೆದು ವಿವರಿಸುವುದರ ಮೂಲಕವೇ ಆರಂಭವಾಗುತ್ತವೆ. ಅವಳ ವಚನಗಳು ಇಲ್ಲಿ ದೇಹವೆಂಬುದು ಲೌಕಿಕ ಮೊತ್ತವಾದರೆ ಮನಸ್ಸೆಂಬುದು ಪಾರಮಾರ್ಥಿಕ ಲೋಕದ ಚಿತ್ತವಾಗಿ ರೂಪುಗೊಳ್ಳುತ್ತದೆ. ಹೀಗಾಗಿ ಅಕ್ಕನ ವಚನಗಳು ಪ್ರಧಾನವಾಗಿ ಎದುರಿಸುವ

ಸವಾಲುಗಳು ವಿಭಜನಾ ಸ್ಥಿತಿಗೆ ಕಾರಣವಾಗುವ ದೇಹವನ್ನೇ ಕುರಿತದ್ದಾಗಿದೆ. ಬಹುಮುಖ್ಯವೆನಿಸುವ ಅವಳ ವಚನಗಳ ಮೂಲ ತುಡಿತ. ತಹತಹ ಸಂಪೂರ್ಣ ದೇಹದ ನಿರಾಕರಣೆಯೇ ಆಗಿದೆ. ಅಕ್ಕಮಹಾದೇವಿಯ ವಚನಗಳಲ್ಲಿ ಈ ದ್ವಂದ್ವವು ಆತಂಕಗಳ ತೀರ್ವತೆಯನ್ನೇನೂ ಬೆಳೆಸದೆ, ಆ ಘಟ್ಟವನ್ನು ಅತ್ಯಂತ ಸರಳೀಕರಣದ ಧಾಟಿಯಲ್ಲಿ ಮೀರಿರುವ ವಿವರಗಳಿಗೂ ಬಸವಣ್ಣನ ವಚನಗಳಲ್ಲಿ ಕಂಡುಬರುವ ಕ್ರಿಯಾತ್ಮಕ ಧಾಟಿಯ ಸ್ವರೂಪಕ್ಕೂ ಹೋಲಿಕೆಯನ್ನು ಮಾಡಬಹುದು. ಅಕ್ಕಮಹಾದೇವಿಯಲ್ಲಿ ಬಸವಣ್ಣನಿಗಿರುವ ಈ ಸಮಸ್ಯೆಗಳು ಇಲ್ಲವೆಂದರೂ ನಡೆಯುತ್ತದೆ. ಆದ್ದರಿಂದಲೇ ಅತ್ಯಂತ ವೈಯಕ್ತಿಕವೆಂದು ತೋರುವ ಅಕ್ಕನ ವಚನಗಳು ನಿವೃತ್ತಿಯ ದ್ವಂದ್ವವನ್ನು ಸುಲಭವಾಗಿ ಪರಿಹರಿಸಲು ಪ್ರಯತ್ನ ಪಟ್ಟಿವೆ. ಇವುಗಳ ಮುಖ್ಯ ಬಯಕೆ ಅಸ್ತಿತ್ವದ ಹೊಸ ನೆಲೆಗಳ ಹುಡುಕಾಟವೇ ಆಗಿದೆ.

ಮೊದಲ ಘಟ್ಟದಲ್ಲಿ ವ್ಯಕ್ತಿತ್ವದ ಛಿದ್ರತೆಯನ್ನು ಗುರುತಿಸಿಕೊಳ್ಳುತ್ತಲೇ ಅದನ್ನು ಪರಿಹರಿಸಿಕೊಳ್ಳುವ ಪ್ರಯತ್ನವೂ ಅಕ್ಕನ ಪ್ರಧಾನ ಗುಣವಾಗುವುದರೊಂದಿಗೆ ಅವಳ ವಚನಗಳಲ್ಲಿ ಈ ದ್ವಂದ್ವವೊಂದು ಹೆಚ್ಚು ಇರುವ ಹಾಗೆ ಕಾಣುವುದಿಲ್ಲ. ದೇಹ ಮನಸ್ಸುಗಳ ಬಿರುಕುಗಳನ್ನು ವಿಶ್ಲೇಷಿಸುವ ವಚನಗಳು ಕೆಲವೇ ಕೆಲುವು. ಯಾವ ಸಾಂದರ್ಭಿಕ ಹಿನ್ನೆಲೆಯಿಂದ ಅಕ್ಕನ ಈ ಪ್ರತಿಕ್ರಿಯಾತ್ಮಕ ನೆಲೆಗಳು ಬಿಚ್ಚಿಕೊಂಡವು. ಎನ್ನುವುದನ್ನು ವಚನ ಪರಿಸರ ವಿಶ್ಲೇಷಣೆಯಲ್ಲಿ ಈ ಹಿಂದೆ ಸೂಚಿಸಿದಂತೆ ಅಕ್ಕಮಹಾದೇವಿಯ ಅನುಭಾವದ ಆಶಯಗಳು ಪ್ರೇಮ ಮತ್ತು ಮಲ್ಲಿಕಾರ್ಜುನನೊಡನೆ ಗಾಢ ಸಂಬಂಧವನ್ನು ಹೊಂದುವಂಥವುಗಳೇ ಆಗಿವೆ. ಈ ಪ್ರೇಮದ ಆಶಯವು ಸುತ್ತಲ ಕಾಮ ವಿಕಾರತೆಯ ಬೆಳವಣಿಗೆಯ ಪ್ರತಿಕ್ರಿಯೆಯಾಗಿಯೇ ಇವಳ ವಚನಗಳಲ್ಲಿ ರೂಪುಗೊಳ್ಳುತ್ತದೆ. ಪ್ರೇಮ ಹಾಗೂ ಕಾಮ ವಿಕಾರತೆಯ ಅಂಶಗಳು ಇವೆರಡರ ನಡುವಣ ವಿರೋಧವೂ ಇವಳ ವ್ಯಕ್ತಿತ್ವದ ಬೆಳವಣಿಗೆಯಲ್ಲಿ ಪ್ರಧಾನವಾದ ಪಾತ್ರವನ್ನು ವಹಿಸಿದ ಹಾಗೆ ತೋರುತ್ತದೆ. ಅಕ್ಕಮಹಾದೇವಿಯ ದಾಂಪತ್ಯ ಬದುಕಿನ ಸಂದರ್ಭಗಳಿಂದಲೇ ಈ ಸಂಘರ್ಷವೊಂದು ಇವಳ ಬಾಳಿನಲ್ಲಿ ಘಟಿಸಿತೆಂದು ಊಹಿಸಲು ಸಾಕಷ್ಟು ಆಧಾರಗಳಿವೆ.

ಮಹಿಳೆಯರ ದೇಹ ಹಾಗೂ ರೂಪ ಕಲ್ಪನೆ ದೇಹದ ಶೃಂಗಾರ ಪರಿಕಲ್ಪನೆಗಳಲ್ಲದ ಸಂಸ್ಕೃತಿಯೇ ವಿಶ್ವದಲ್ಲಿಲ್ಲ. ಅಕ್ಕ ಮನಸ್ಸು ಮತ್ತು ದೇಹದಲ್ಲಿ ದೊಡ್ಡ ಬಿರುಕುಗಳು ಸೃಷ್ಟಿಯಾಗಿರುವುದನ್ನು ಕಂಡು ಬೇಸತ್ತು. ಬೆರಗಾಗಿ ಅಂಧಶ್ರದ್ಧೆಯ ಭವಿಗಳನ್ನು ಒದ್ದೆಯಾದ ಭಾವದಿಂದಲೇ ಮಾರ್ಮಿಕವಾಗಿ ಕಟುಸತ್ಯವನ್ನು ಎದುರಿಗಿಟ್ಟು ಪ್ರಶ್ನಿಸುತ್ತಾಳೆ. ಹೆಣ್ಣನ್ನು ಎಷ್ಟೊಂದು ಕನಿಷ್ಟ ಬಡ ಭಾವದಿಂದ ಕಂಡಿದೆ. ಈ ಲೌಕಿಕದ ಜಗತ್ತು ಎಂದರಿತ ಈ ವಿರಾಗಿಣಿ ಅಕ್ಕ ಮನಸೊಂದು ಹೇಸಿಗೆಪಟ್ಟು, ಮಾನಸಿಕ ದ್ವಂದ್ವದಲ್ಲಿ ಕುದಿಯುತ್ತಾಳೆ. ಈ ಕುದಿಯುವಿಕೆಯ ತಳದಲ್ಲಿ ಸಾಮರಸ್ಯವನ್ನು ಬಯಸುವ ವಿವೇಕ, ಎಚ್ಚರ ಭಾವುಕ ಸಿಟ್ಟಿನಲ್ಲಿ ಮುಳುಗಿ ಮರೆಯಾಗುವುದಿಲ್ಲ ಎನ್ನುವ ಸೂಚನೆಗಳು, ಒಳನೋಟಗಳೂ ಲಭ್ಯವಾಗುತ್ತವೆ.

ಕಾವ್ಯಾಂಶ ಮತ್ತು ಜೀವಾಂಶಗಳ ಮಧ್ಯ ಮನುಷ್ಯ ಸ್ವಭಾವ ಶ್ರದ್ಧೆ, ನಿಷ್ಠೆ, ನಿಜ ನಿರ್ಮಿತಿಗಳು ಹೇಗೆ ನಿರ್ಭಯವಾಗುತ್ತವೆ. ಎನ್ನುವುದಕ್ಕೆ ಅಕ್ಕನ ಈ ಒಡಲ ತುಂಬಿದ ಭಾವನೆಗಳೇ ಸಾಕ್ಷಿ. ಇಲ್ಲಿ ನೋಡುವ ಕಂಗಳಿಗೆ ರೂಪಿಂಬಾಗಿಲು "ಕೇಳಿದ ಶ್ರೋತ್ರ ಸೊಗಸಿಗೆ ನೀವು ಮರುಳಾಗಿ ಸಾರಿಯೆಂಬ ರೂಪಿಂಗೆ ನೀವು ಒಲಿದು ಮೂತ್ರವು ಬಂದು ಒಸರುವ ನಾಳ" ಹೀಗೆ ಆಕರ್ಷಣೆಗೆ ಒಳಗಾದ ಲೌಕಿಕ ಜಗತ್ತನ್ನು ಕುರಿತು ವಿವರ ಒದಗಿಸುವ ಈ ಸಾಲುಗಳು ಹಾಗೆಯೇ ಮುಂದುವರಿಯದೆ ಬುದ್ಧಿಗೇಡಿತನದಿಂದ ಪರಮಾರ್ಥದ ಸುಖವ ಹೋಗಲಾಡಿಸಿಕೊಂಡು ಎನ್ನುವಲ್ಲಿ ಈ ವಚನದ ತಿರುವು ನಿಜದನಿಯನ್ನು ಸ್ಪರ್ಶಗೊಳಿಸುತ್ತದೆ. ನೀವು ನರಕ ಹೇತುವಂದರಿತು ಮನಹೇಸದ ಎನ್ನುವಲ್ಲಿ ಮೊದಲಿನ ಆಶಯವನ್ನು ಸಾತತ್ಯಗೊಳಿಡಿ – ಪುರುಷವರ್ಗವ ಕುರಿತು ; ಅವಳ ಅಭಿಪ್ರಾಯ ಸ್ಪಷ್ಟಗೊಳ್ಳುತ್ತದೆ. ಪರಮಾರ್ಥವ ಸುಖ 'ಪರಮಸುಖ' ಎನ್ನುವ ಅರ್ಥಕ್ರಿಯೆಗಳು ಶರಣರಲ್ಲಿ ಸಮಾನಾರ್ಥಕಗಳಾಗಿಯೇ ಬಳಕೆಯಾಗಿವೆ.

ಒಂದೆಡೆ ಅಕ್ಕನೇ ಪರಮ ಸುಖ ಪರಿಣಾಮ 'ಘನಸುಖದ ಪೊರಿಯೆ' ಎಂದು ಬಳಸುತ್ತಾಳೆ. ಅಕ್ಕನ ಸರ್ವಸಾಧ್ಯವಾದ ಭಾವನೆಗಳ ತೀವ್ರ ಗಮ್ಯತೆ ಇನ್ನಷ್ಟು ಹರಳುಗಟ್ಟುತ್ತಲೇ ನೈಜವಾದ ನೇರತೆಯಿಂದ ತನ್ನ ಉದ್ದೇಶವನ್ನು ಚೂಪಾಗಿಸುತ್ತದೆ. ಈ ಚೂಪು ಎಷ್ಟು ಹರಿತವಾದದ್ದು ಎಂದರೆ ಅಭದ್ರವಾದ ಪುರುಷ ಮನಸ್ಸುಗಳು ನಡುಗಿ ಉಡುಗಿ ಹೋಗುವಷ್ಟು, ಅಂದರೆ ಇಲ್ಲಿ ಇಂದ್ರಿಯ ಪಾತಳಿಯ ಬದುಕು ಮತ್ತು ಕ್ರಿಯೆಗಳು ಮನುಷ್ಯನ ಅಧಃಪತನಕ್ಕೆ ಕಾರಣವಾಗಿರುವುದನ್ನು ಅಕ್ಕಮಹಾದೇವಿಯ ವಚನಗಳು ಗುರುತಿಸುತ್ತವೆ.

ಈ ಅಧಃಪತನವು ಮನುಷ್ಯನ ಒಟ್ಟು ಸಾಮರ್ಥ್ಯವನ್ನು ವ್ಯಕ್ತಿತ್ವದ ಹಲವು ನೆಲೆಗಳ ಗ್ರಹಿಕೆಯನ್ನೂ ಮಾಡಲಾಗುವುದಿಲ್ಲ. ಎನ್ನುವುದೇ ಇಲ್ಲಿ ನೋವಿಗೆ ಗುರಿಯಾಗುವ ಸಂಗತಿಯಾಗಿದೆ. ಹೆಣ್ಣಾದ ಅಕ್ಕ ತನ್ನ ಹೆಣ್ತನದ ಎಲ್ಲಾ ಬಾಹ್ಯ ನೆಲೆಗಳನ್ನು ನಿರಾಕರಿಸುವ ಧೋರಣೆಯಲ್ಲಿ ಪಾರಮಾರ್ಥಿಕ ಲೋಕವಾಗಲೀ, ಲೌಕಿಕ ಲೋಕವಾಗಲೀ, ಹೆಣ್ಣನ್ನು ಕೀಳಾಗಿ ಕಾಣುವ ಕಣ್ಣುಗಳನ್ನು ಕಲುಷಿತಗೊಂಡ ಕೊಳಕು ಮನಸ್ಸುಗಳನ್ನು ಲೈಂಗಿಕ ಪರಿಭಾಷೆಯಲ್ಲಿಯೇ ವಿರೋಧಿಸುತ್ತಾಳೆ. ಈ ವಿರೋಧಿ ನೆಲೆಯ ಬಯಲು ಅವಳಲ್ಲಿ ಅನುಭಾವದ ಆತ್ಯಂತಿಕ ಎತ್ತರದ ನಿಲುಮೆಯನ್ನೇ ಸ್ಥಾಪಿಸಿದೆ.

ಲೌಕಿಕವನ್ನು ನಿರಾಕರಿಸಿದರೂ ಪರಮಾರ್ಥಿಕದ 'ನಿಜಘನ'ದ ಜೀವನವನ್ನು ಸ್ವೀಕರಿಸಿಯೂ ಲೌಕಿಕದ ಕ್ಷಣಿಕ ಸವಾಲುಗಳು ಮಾತ್ರ ಅವಳನ್ನು ಬೆಂಬಿಡದೆ ಕಾಡಿದವು. ಅವಳ ಮನೋಸ್ಥೈರ್ಯವನ್ನೇ ಕಂಗೆಡಿಸಲು ಹಟತೊಟ್ಟವು. ಈ ಕಂಗೆಡಿಸುವ ಛಿದ್ರಗೊಳಿಸುವ ಸರ್ವ ಸವಾಲುಗಳನ್ನು ಎದುರುಗೊಳ್ಳುವ ಧೈರ್ಯ ಕನ್ನಡ ಸಾಹಿತ್ಯದಲ್ಲಿ ಚಾರಿತ್ರಿಕವಾಗಿ ಗಮನಿಸಲಾಗಿ ಅಕ್ಕನಿಂದ ಮಾತ್ರ ಸಾಧ್ಯವಾಗಿದೆ.

ಲೌಕಿಕದ ನೆಲೆಯಲ್ಲಿ ಆರೋಪಗೊಳಿಸಿ, ಅಕ್ಕ ತನ್ನ ಅಂತರಂಗದ ನಿಜಾಂಶಗಳನ್ನು ಖಾರವಾಗಿಯೇ ನಿರೂಪಿಸುವ ನೀತಿಯ ನಿಲುವನ್ನು ನಿಲುಗಡೆಗೊಂಡ ವಿನಮ್ರ ವಿನಯ – ಅವಳ ವಚನಕ್ಕೆ ಅತ್ಯಂತ ಧ್ವನಿ ಶಕ್ತಿಯನ್ನೇ ಪ್ರಾಪ್ತವಾಗಿಸಿದೆ. ಅದು ಎಂಥ ಧ್ವನಿಶಕ್ತಿ ಎಂದರೆ ಆರೋಪಗೊಳಿಸುವ ತನ್ನ ಲೌಕಿಕದ ವಿವೇಕವನ್ನು ತಟಕ್ಕನೆ ಅನುಭಾವಿಕ ವಿವೇಕವನ್ನಾಗಿ ಪರಿವರ್ತಿತಗೊಳ್ಳುವಲ್ಲಿ, ಅಲ್ಲಿಯೂ ಅಂತರ್ಮುಖಿಯಾಗಿ ತೀರ ವೈಯಕ್ತಿಕವಾಗಿ ಎದುರಿಸುವ ಸೂಕ್ಷ್ಮ ಸವಾಲುಗಳಲ್ಲಿ ಮೌನಗೊಡದೆ ಕುದಿಯುತ್ತಿರುವ ದ್ವಂದ್ವ ಮತ್ತು ವೈರುಧ್ಯಗಳ ಸಂಘರ್ಷದಲ್ಲಿ ಪ್ರಕಟಗೊಳ್ಳುತ್ತದೆ. ತಣ್ಣಗಾದ ಅಕ್ಕನ ತಾತ್ವಿಕ ರೋಷ ಇಲ್ಲಿ ಕಾವ್ಯಮಯವಾಗಿ, ಭಾವಗೀತವಾಗಿ, ಚದುರಿದ ಭಾವ ಭಾವನೆಗಳು ಮಡುಗೊಳ್ಳುತ್ತದೆ. ದುಷ್ಟಶಕ್ತಿಗಳ ಸಕಾರಾತ್ಮಕ ಮೌಲ್ಯಗಳನ್ನು ಸಕಾರಾತ್ಮಕಗೊಳಿಸುವ ಗೊಡವೆ ನಮಗೇಕೆ ? ಎಂದು ಬೇಸರದಿಂದ ಅಕ್ಕ ತನ್ನ ಒಡಲನ್ನೇ ಹಳಿದುಕೊಂಡರೂ ಇದನ್ನು ಹೋರಾಟದಿಂದ ಗೆಲ್ಲುವ ಛಲ ಬಸವಣ್ಣನ ಹಾಗೆ ಅಲ್ಲದಿದ್ದರೂ ಅರ್ಥಗೊಳಿಸುವ ಆಶಯಗಳು ಮಾತ್ರ ಬಸವಳಿಯುವುದಿಲ್ಲ – ಇಂಗಿ ಹೋಗುವುದಿಲ್ಲ. ಮನುಷ್ಯನು ತನ್ನ ಬಾಳಿನಲ್ಲಿ ಅತ್ಯವಶ್ಯಕವಾಗಿ ಭರಿಸಿಕೊಳ್ಳಬೇಕಾದ, ಪ್ರಾಣವನ್ನು ಬಹಳ ಜತನದಿಂದ ರಕ್ಷಿಸಿಕೊಳ್ಳುವಂತೆಯೇ ಅದನ್ನು ದಕ್ಕಿಸಿಕೊಳ್ಳುವ ಜೀವದ್ರವ್ಯವನ್ನು ಕುರಿತು ಮೂಲಭೂತ ಪ್ರಶ್ನೆಯನ್ನು ಅಕ್ಕನ ವಚನಗಳು ಎತ್ತುತ್ತವೆ.

ಗುಣಶೀಲೆಯಾದ ವೀರಶೈವ ಮಹಿಳೆಯಾಗಲು ನಾಯಕ ಪ್ರಧಾನ ಗುಣಗಳನ್ನು ಅವಧರಿಸಿಕೊಳ್ಳಬೇಕಾಗುವುದು. ತನ್ನಲ್ಲಿರುವ ಆಸೆ, ಆಮಿಷ ಮೀರಲು ಉಡುಗೆಯು ಸಹಾಯಕವಾಗುವಂತಹ ಸಂಕೇತವಾಗುವುದು. ತನ್ಮೂಲಕ ಸ್ಥೈರ್ಯ, ದೃಢತೆ, ಸಶಕ್ತ ಮನಸ್ಸನ್ನು ಪ್ರತಿನಿಧಿಸುವುದು ಯುದ್ಧದ ಅಲಂಕಾರಿಕತೆ, ಸನ್ನದ್ಧತೆಗೆ ಪೂರಕವಾದಂತಹ ಅಂಶವಾಗಿ ಹೊರಹೊಮ್ಮಿರುವುದು. ಶತ್ರುವಿನ ಧ್ವಂಸವೆಂದರೆ ತನ್ನಲ್ಲಿರುವ ಭವಿತನದ ಕೊಲ್ಲುವಿಕೆ, ತನ್ನನ್ನು ತಾನೇ ಗೆಲ್ಲುವ ಪರಿಯದು, ಯುದ್ಧ ಮತ್ತು ಯೋಧಳ ರೂಪಕಗಳನ್ನು ಕಾಣಬಹುದು.

ಯುದ್ಧ ರಕ್ಷಣೆ, ಹೆದರದಿರುವಿಕೆ, ನಿಷ್ಠೆ, ದೃಢತೆ, ಗೆಲ್ಲುವುದು, ಹಿಮ್ಮೆಟ್ಟದಿರುವುದು ಮುಂತಾದವು ಸಾಮಾನ್ಯವಾಗಿ ಪುರುಷತ್ವವನ್ನು ಪ್ರತಿನಿಧಿಸುವ ಗುಣಗಳು ; ಇಲ್ಲಿ ಬಳಸಿರುವಂತಹ ಯುದ್ಧ ಮತ್ತು ಯೋಧ ರೂಪಕಗಳಲ್ಲಿ ಇದನ್ನು ಕಾಣಬಹುದು. ಗಮನಿಸಬೇಕಾದ ಅಂಶವೆಂದರೆ ಸಮುದಾಯವು ತಾನು ನಂಬಿರುವಂತಹ ಆಚರಣೆಗಳನ್ನು, ಅದರ ಮೂಲಕ ತಾನು ಸೇರಿರುವ ವೀರಶೈವ ಸಮುದಾಯವನ್ನು ಪ್ರತಿನಿಧಿಸಲು ಸದರಿ ಪ್ರತಿಮೆಗಳನ್ನು ಅಕ್ಕ ಬಳಸಿದ್ದಾಳೆ. ಐಕ್ಯದ ಸ್ಥಿತಿಯನ್ನು ತಲುಪಲು ಸಮುದಾಯದ ಆಚರಣೆಗಳನ್ನು ಯಾವುದೇ ಕುಂದಿಲ್ಲದೆ ಪರಿಪಾಲಿಸಬೇಕಾದರೆ, ಬೇಕಾಗುವಂತಹ 'ವೀರತ್ವ'ದ ಗುಣಗಳು ಪುರುಷತ್ವದ ಗುಣಗಳೇ ಆಗಿವೆ. ಅಂದರೆ ಹಂತಹಂತವಾಗಿ ಷಟ್‌ಸ್ಥಲದ ಹಾದಿಯನ್ನು ಕ್ರಮಿಸುವಾಗ ಮೊದಲ ಹೆಜ್ಜೆಯಾಗಿ ಕಾಣಿಸುವಂತಹ ಭವದ ಗುಣಗಳ ಗೆಲುವಿಗೆ ಪೂರಕವಾಗಿ ಮತ್ತು ಧಾರ್ಮಿಕ ಆಚಾರದ ಒಂದು ಭಾಗವಾಗಿ ಗುಣಾಚಾರವನ್ನು ಅಕ್ಕ ಇಲ್ಲಿ

ಪುರುಷತ್ವದ ನೆಲೆಯಲ್ಲಿ ವರ್ಣಿಸುತ್ತಾಳೆ. ಸಮುದಾಯಕ್ಕೆ ಅಪಖ್ಯಾತಿ ಬಂದಾಗ, ಅದನ್ನು ಉಳಿಸಿಕೊಳ್ಳಲು ವೀರಪುರುಷತ್ವದ ವೇಷ ತೊಟ್ಟು, ಶರಣತ್ವದ ಘನತೆ ಗೌರವವನ್ನು ಕಾಪಾಡುವ 'ಗಣಾಚಾರಿದಯೋಗಿ ಕಂಕಣಬದ್ಧಳಾಗುತ್ತಾಳೆ'.

ಚಾರಿತ್ರಿಕವಾಗಿ ವಿಶ್ಲೇಷಿಸುವುದಾದರೆ, ೧೨ನೇ ಶತಮಾನದಲ್ಲಿ ಬೇರೆ ಬೇರೆ ಧರ್ಮಗಳಿಂದ ವೀರಶೈವವಾಗುವುದು. ಹೇಗೆಂದರೆ, ತನ್ನೊಳಗಡೆಯಿರುವಂತಹ ಭವದ ಅಂಶಗಳು ಮತ್ತು ಬಹಿರಂಗದ ಆಚರಣೆಯಲ್ಲಿ ಕಾಣಿಸುವಂತಹ ಹಿಂದಿನ ಸಂಪ್ರದಾಯಗಳ ಭವದ ವಾಸನೆಯ ಅಂಶಗಳು ಎರಡೂ ಗೆಲ್ಲಬೇಕು. ಈ ಎರಡನ್ನೂ ಏಕಕಾಲಕ್ಕೆ ಗೆಲ್ಲುವ ಸೆಣಸಾಟವು ಅಕ್ಕ. ಬಳಸುವಂತಹ ಯುದ್ಧದ ರೂಪಕಗಳ ಮೂಲಕ ಅನಾವರಣಗೊಳ್ಳುವುದು.

ಆಧುನಿಕ ಸ್ತ್ರೀವಾದಿಯರ ವಿಮರ್ಶೆಯಲ್ಲಿ ದೇಹ ಮತ್ತು ಲಿಂಗತ್ವವನ್ನು ಬೇರ್ಪಡಿಸಿ ಲಿಂಗತ್ವ ಸಾಮಾಜಿಕ ನಿರ್ಮತಿಯೆಂದೂ ದೇಹವನ್ನು ಗಂಡು ಮತ್ತು ಹೆಣ್ಣು ವಿಭಾಗೀಕರಿಸಲಾಗಿದೆ. ಇಲ್ಲಿ ದೇಹವನ್ನು ಸಹಜವೆಂಬಂತೆ ನೋಡಲಾಗಿದೆ. ಇಲ್ಲಿ ದೇಹವು ಜೈವಿಕ ಲಿಂಗತ್ವವು ಸಾಮಾಜಿಕವಾದುದೆಂಬ ಪರಿಗಣನೆ, ರಾಜಕೀಯವಾಗಿ ಮುಕ್ತಿ ನೀಡುವಂತಹದ್ದು. ಆದರೂ, ಅದರಲ್ಲಿ ಅಡಕವಾಗಿರುವಂತಹ ಮುಖ್ಯ ಸಮಸ್ಯೆಯೇನೆಂದರೆ, ದೇಹವನ್ನು ನಿಗದಿತವಾಗಿ ನೀಡಲ್ಪಟ್ಟಿರುವಂತೆ ನೋಡುವುದು. ಅಕ್ಕನಲ್ಲಿ ಜೈವಿಕವಾಗಿರುವಂತಹದ್ದರ ಮೂಲಕವೇ ನಿಗದಿಗೊಳಪಡದೆ, ಸ್ತ್ರೀತ್ವ ಮತ್ತು ಪುರುಷತ್ವ ನಿರ್ಮಾಣಗೊಳ್ಳುವುದು ಅಕ್ಕನಲ್ಲಿ ದೇಹದ ಪ್ರತಿಮೆ ನಿಗದಿಯಾಗಿರುವಂಥದ್ದಲ್ಲ. ಅಲ್ಲಿ ಸ್ತ್ರೀತ್ವ ಮತ್ತು ಪುರುಷತ್ವದ ಸಂಕೀರ್ಣತೆಯನ್ನು ನಾವು ಕಾಣಬಹುದು. ಅಂತರಂಗದ ಆಮಿಷಗಳು ಮಾನಸಿಕವಾಗಿರುವಂಥವು. ಬಹಿರಂಗದ ಆಮಿಷಗಳು ಪಾರಂಪರಿಕ ಭವಕ್ಕೆ ಸಂಬಂಧಿಸಿರುವವು ; ಇವೆರಡನ್ನೂ ಮೀರುವ ಸಾಮಾಜಿಕ ಸ್ತ್ರೀತ್ವವನ್ನು ಧಾರ್ಮಿಕ ಸ್ತ್ರೀತ್ವದಲ್ಲಿಟ್ಟು ಆದರ್ಶೀಕರಿಸಿ, ವೈಭವೀಕರಿಸಲಾಗಿದೆ. ಪ್ರಾಚೀನ ಭಾರತದಲ್ಲಿ, ಆಧುನಿಕ ಭಾರತದ ಎಲ್ಲಾ ಅಂಶಗಳು ಅಡಕವಾಗಿದ್ದವು. ಎಂದಲ್ಲ. ಬದಲಾಗಿ ಅಕ್ಕನಲ್ಲಿ ಕಾಣಿಸಿಕೊಳ್ಳುವ ಸ್ತ್ರೀತ್ವದ ಕಲ್ಪನೆ ಸಂಕೀರ್ಣವಾದಂತಹುದು ಎಂಬುದು ಕಾಯ ನಿರಂತರವಾಗಿ, ಸಾರ್ವಜನಿಕವಾಗಿ ಬದಲಾಗದಿರುವಂತೆ ಕಾಣಿಸಿಕೊಳ್ಳದೆ, ಬೇರೆ – ಬೇರೆ ಸಂದರ್ಭಗಳಲ್ಲಿ ಪರಿವರ್ತಿಸಬಹುದಾದ ಸಾಧನವಾಗಿ ಕಾಣಿಸಿಕೊಂಡಿರುವುದು. ಆ ಸಾಧನದ ಮೂಲಕ, ಅತೀ ಎತ್ತರವಾದಂತಹ ದೇವರನ್ನು ಮುಟ್ಟುವ ಗುರಿ ಹೊಂದಿರುವುದು ಲಿಂಗೈಕ್ಯ ಸಾಧಿಸಲು ಬೇಕಾಗಿರುಗವಂತಹ ಸ್ತ್ರೀತ್ವ, ಶರಣತ್ವ, ಕಿಂಕರಭಾವ, ಅರ್ಪಣಾ ಮನೋಭಾವದ ಮೂಲಕ ಆತ್ಯಂತಿಕ ಮಟ್ಟದ ಸ್ತ್ರೀತ್ವವನ್ನು ಪಡೆಯುವುದು. ಈ ಸನ್ನಿವೇಶದಲ್ಲಿ ಸ್ತ್ರೀತ್ವದ ಅವಕಾಶ ಮತ್ತು ಪುರುಷತ್ವದ ಅವಕಾಶ ಮತ್ತು ಅವುಗಳ ನಡುವೆ ಇರುವ ನೈತಿಕ ಅಂತರಸ್ತರವು ಒಂದರ್ಥದಲ್ಲಿ ಅತ್ಯಂತ ಉತ್ಕೃಷ್ಟವಾಗಿರುವಂತಹ ಸ್ತ್ರೀತ್ವವನ್ನು ಪ್ರಸ್ತಾಪಿಸುತ್ತದೆ. ಆದರೂ ಕಿಂಕರಭಾವದ ಸ್ತ್ರೀ ನಿರ್ಮಿತಿಯನ್ನು ನಾವು ಕಾಣುತ್ತೇವೆ. ಅಕ್ಕನಲ್ಲಿ ಸ್ತ್ರೀತ್ವದ ಕಲ್ಪನೆ ಉತ್ತುಂಗವೂ ಹೌದು, ಶಿಥಿಲವೂ

ಹೌದು, ಇದನ್ನು ಏಕಕಾಲದಲ್ಲಿ ಅವಳು ಅಭಿವ್ಯಕ್ತ ಪಡಿಸುತ್ತಾಳೆ. ಕೂಡ. ಸಾಮಾಜಿಕವಾಗಿರುವಂತಹ ಸ್ತ್ರೀತ್ವವನ್ನು ಧಾರ್ಮಿಕ ವಲಯಕ್ಕೆ ತಂದು ಅದನ್ನು ಉನ್ನತಗೊಳಿಸಿದರೂ, ಅದೇ ತರಹದ ಅಸಮಾನ ಸಂಬಂಧಗಳನ್ನು ಧಾರ್ಮಿಕ ನೆಲೆಯಲ್ಲೂ ಕಾಣುತ್ತಾಳೆ. ಮೂಲಭೂತವಾಗಿ ಅಕ್ಕನಲ್ಲಿ ದೇಹದ ಕಲ್ಪನೆ ನಿಗದಿಗೊಳಪಡದಿದ್ದರೂ, ಸಾಮಾಜಿಕ ನಿರ್ಮಿತಿಯ ಹಿನ್ನೆಲೆಯಲ್ಲಿಯೇ ಸ್ತ್ರೀತ್ವ ಪುನರ್‌ರೂಪುಗೊಳ್ಳುವುದು.

ಸ್ತ್ರೀತ್ವ ಎನ್ನುವುದು ಗುರಿ ಮುಟ್ಟಲು ಒಂದು ಸಾಮರ್ಥ್ಯ ಮತ್ತು ಸದ್ಗುಣವಾಗಿ ನೋಡಲಾಗಿದೆ. ಗಂಡಾಗಲಿ, ಹೆಣ್ಣಾಗಲಿ ಈ ಸ್ತ್ರೀತ್ವವನ್ನು ಪಡೆಯುವ ಸಾಧ್ಯತೆ ಇದೆ. ಅದು ಎಲ್ಲರೂ ಆಚರಣೆಗೆ ತರಬಹುದಾದ ಗುಣವಾಗಿದೆ. ಹೀಗೆ ಸ್ತ್ರೀತ್ವ ಅಕ್ಕನಲ್ಲಿ ಒಂದು ಸಾಮರ್ಥ್ಯವೂ ಹೌದು, ಶಕ್ತಿಯೂ ಹೌದು. ಹೀಗಾಗಿ ಅಕ್ಕನಲ್ಲಿ ನಾವು ಕಾಣಬಹುದಾದಂತಹ ದೇಹದ ಮೂಲಕ ನಿರ್ಮಿತವಾಗುವಂತಹ ಸ್ತ್ರೀತ್ವ ಸಾಧನವೂ ಹೌದು. ಸಾಧನೆಯು ಒಂದು ವಿಧಾನವೂ ಹೌದು ಮತ್ತು ಗುರಿಯೂ ಆಗಿದೆ.

ನಮ್ಮ ಮಹಿಳಾ ಮಣಿಗಳ ವಿಮರ್ಶೆಯಲ್ಲಿ ಕಂಡು ಬರುವ ಖಾಸಗಿ ಮತ್ತು ಸಾರ್ವಜನಿಕ ಎಂಬ ಪ್ರತ್ಯೇಕ ವಲಯಗಳನ್ನು ನಾವು ಕಾಣುವ ದ್ವಂದ್ವ ಪರಿಸ್ಥಿತಿ ಭಿನ್ನವಾಗಿ ಇಲ್ಲಿ ನಿರ್ಮಾಣಗೊಳ್ಳುವುದೇ ಇಲ್ಲ. ಏಕೆಂದರೆ, ಖಾಸಗಿ ವಲಯದಲ್ಲಿ ಶಿಶುಪಾಲನೆ, ಅಡುಗೆ, ಹೆರುವುದು ಇತ್ಯಾದಿಗಳನ್ನು ಅಧಿಕಾರ ಮತ್ತು ನಿಯಂತ್ರಣಗಳು ಇಲ್ಲದಿರುವ ಕಾರಣ ಅವನ್ನು ಕೆಳಸ್ತರದಲ್ಲಿ ಇಡಲಾಗಿದೆ. ಆದರೆ ಇಲ್ಲಿ ನಾವು ಕಾಣುವುದೇನೆಂದರೆ ಮನೆ ಮತ್ತು ರಣರಂಗ ವಲಯಗಳು (ಸಾರ್ವಜನಿಕ) 'ಪ್ರಬಲ ಮತ್ತು ದುರ್ಬಲ ಎಂಬ ವೈರುಧ್ಯವನ್ನು ತೊಡೆದು ಹಾಕುತ್ತವೆ. ಏಕೆಂದರೆ, ಖಾಸಗಿ ವಲಯದಲ್ಲಿ ಮಹತ್ವಾಕಾಂಕ್ಷಿಯಾದ ಐಕ್ಯವನ್ನು ಸಾಧಿಸುವುದಕ್ಕೆ ಬೇಕಾದಂತಹ ವ್ಯಕ್ತಿತ್ವ ಸತೀತ್ವದ್ದಾಗಿದೆ.

ಪುರುಷ ಪ್ರಧಾನ ಅಥವಾ ಪಿತೃಪ್ರಧಾನ ವ್ಯವಸ್ಥೆ ಬದುಕಿನ ಎಲ್ಲಾ ಸ್ತರಗಳಲ್ಲೂ ಹರಡಿರಿವುದರಿಂದ ಆ ವ್ಯವಸ್ಥೆಯ ಸಂದರ್ಭ, ಶೈಲಿ, ಆಕಾರ, ಪರಿಣಾಮಗಳಲ್ಲಿ ಬೆಳೆದಿರುವ ಸಂಸ್ಥೆಗಳಲ್ಲಿ ಪಿತೃಪ್ರಧಾನ ಸಂಸ್ಥೆಗಳೇ ಆಗಿರುತ್ತದೆಂದು ಪ್ರತಿಪಾದಿಸಲಾಯಿತು. ಈ ವಿಚಾರ ಕ್ರಮದಲ್ಲಿ, ಈ ಪುರುಷ ಪ್ರಾಬಲ್ಯವೆಂಬುದು ಒಂದು ರೀತಿಯ ಅಮೂರ್ತ ಶಕ್ತಿಯಾಗಿ, ಕಾಲ, ದೇಶ, ಸಂಸ್ಕೃತಿ, ಪರಿಸರಗಳೆಲ್ಲವನ್ನೂ ಮೀರಿ ಎಲ್ಲಾ ಕಡೆ ವ್ಯಾಪಿಸಿರುವುದೆಂಬ ಪರಿಕಲ್ಪನೆ ಬೆಳೆಯಿತು. ಚರಿತ್ರೆ, ತತ್ವಶಾಸ್ತ್ರ, ರಾಜಕೀಯ ಮತ್ತು ವಾಸ್ತವದ ಬಗ್ಗೆ ಪ್ರಚಲಿತವಿರುವ ಎಲ್ಲಾ ವ್ಯಾಖ್ಯಾನಗಳೂ ಸ್ತ್ರೀಯನ್ನು ದೂರವಿಟ್ಟಿವೆ ಎಂದು ಭಾವಿಸಲಾಯಿತು. ಈ ರೀತಿಯಲ್ಲಿ 'ಮಹಿಳೆ ಎಂಬ ತಾತ್ವಿಕ ಘಟಕ'ಕ್ಕೆ 'ಮಹಿಳಾ ಅನುಭವ' ಎಂಬುದೂ, ಮಹಿಳಾ ಅನುಭವ ಎಂಬುದಕ್ಕೆ 'ವೈಯಕ್ತಿಕ ರಾಜಕಾರಣ' ಎಂಬುದೂ ಬೆಂಬಲದ ಘಟಕಗಳಾಗಿ ಸ್ತ್ರೀವಾದಿಗಳ ಮುಖ್ಯ ನೆಲೆಗಳಾದವು.

ಮೇಲೆ ಸೂಚಿಸಿರುವ ಹಾಗೆ ನಾವು ಕಾಣಬಹುದಾದ ಅನೇಕ ವೈರುಧ್ಯಾತ್ಮಕ ಆಯಾಮಗಳ ಬಗೆಗಿನ ಗಂಭೀರ ಸಾಂಸ್ಕೃತಿಕ ಅಧ್ಯಯನ ಮತ್ತು ಅದು ಒಡ್ಡುವ ವಿಫುಲ ಅರ್ಥ ಸಾಧ್ಯತೆಗಳ ಹಿನ್ನೆಲೆಯಲ್ಲಿ ಅಕ್ಕನ ವಚನಗಳನ್ನು ಮರು ಓದಿಗೆ ಒಳಪಡಿಸುವ, ಮನನ ಮಾಡಿಕೊಳ್ಳುವ, ಹೊಸ ಒಳನೋಟಗಳನ್ನು ಕಂಡುಕೊಳ್ಳುವ ಪ್ರಯತ್ನ ಇನ್ನೂ ಆಗಬೇಕಾಗಿದೆ.

ಅಕ್ಕನ ಬಗ್ಗೆ ಸಬಿತಾರವರ ನೋಟ : ಅಕ್ಕ ವಿವಾಹ, ಗಂಡ ಮತ್ತು ಕಾಮದ ಬಗೆಗೆ ತಳೆಯುವ ನಿಲುವುಗಳು ಬೇರೆಲ್ಲರಿಗಿಂತಲೂ ಭಿನ್ನವಾಗುವುದರ ಕಾರಣ ಏನು ? ಅಕ್ಕ ಆ ಕಾಲದಲ್ಲಿ ತೋರಿದ ದಿಟ್ಟತನ ಈಗಿನ ಅತ್ಯಾಧುನಿಕ ಎನಿಸಿಕೊಂಡ ಮಹಿಳೆಗೂ ಬೆರಗು ಹುಟ್ಟಿಸುವ ಪರಿ ಇವೆಲ್ಲವೂ ನನ್ನನ್ನು ಕಾಡಿದ ವಿಚಾರಗಳು. ನಾನು ಇದಕ್ಕೆಲ್ಲಾ ಅಕ್ಕ ಮತ್ತು ಇತರ ವಚನಕಾರ್ತಿಯರ ನಡುವೆ ಹೋಲಿಕೆ ಮಾಡುವುದರ ಮೂಲಕ ಉತ್ತರ ಕಂಡುಕೊಳ್ಳಲು ನನ್ನೊಳಗೇ ಪ್ರಯತ್ನಿಸಿದೆ ಅನ್ನುತ್ತಾಳೆ. ಇಲ್ಲಿ ಬಹಳ ಮುಖ್ಯವಾಗಿದ್ದು, ವಚನಕಾರ್ತಿಯರ ನಡುವಿನ ಪರಸ್ಪರರ ಬಗೆಗಿನ ಅವರ ಮೌನ, ಯಾಕೆ ಆ ಮೌನ ? ಅನುಭವ ಮಂಟಪದ ಪುರುಷರನ್ನು ಉಲ್ಲೇಖಿಸುವ ಅಕ್ಕನಿಗೆ ಅಲ್ಲಿ ಯಾವ ಜೊತೆಗಾತಿಯೂ ಸಿಗಲಿಲ್ಲವೆ ? ಅಕ್ಕನ ಬಗೆಗೆ ಉಳಿದ ವಚನಕಾರ್ತಿಯರಿಗೆ ಏನೂ ಅನಿಸಲಿಲ್ಲವೇ ? ಅಥವಾ ಇರವರುಗಳು ಪರಸ್ಪರ ಸಂಧಿಸಲೇ ಇಲ್ಲವೆ ? ಇವರುಗಳು ಕಂದಕದ ಮೂಲ ಎಲ್ಲಿದೆ ? ಇವರುಗಳ ನಡುವೆ ಹೋಲಿಕೆ ಮಾಡುವುದು ಸಾಧ್ಯವೇ ? ಇಲ್ಲದ ವಿಚಾರ ಎಂಬುದು ನನಗೆ ಗೋಚರವಾಗುತ್ತಾ ಹೋಯಿತು. ಏಕೆಂದರೆ ಇತರ ವಚನಕಾರರು ಪುರುಷರೂ ಸೇರಿದಂತೆ ಮತ್ತು ಅಕ್ಕನ ನಡುವಿರುವ ಸಮಾನ ಹೋಲಿಕೆಯೆಂದರೆ ಅದು ಶಿವನೆಡೆಗಿನ ಭಕ್ತಿಯಲ್ಲಿ ಮಾತ್ರ. ಇನ್ನುಳಿದಂತೆ ಅಕ್ಕನ ದಾರಿಯೇ ಬೇರೆ...... ಹೀಗಾಗಿ ಉತ್ತರ ಹೋಲಿಕೆಯಲ್ಲಿಲ್ಲ. ವ್ಯತ್ಯಾಸದಲ್ಲಿದೆ ಅನ್ನಿಸಲಾರಂಭಿಸಿ. ಅಕ್ಕನಿಗೂ ಉಳಿದವರಿಗೂ ಇರುವ ಮುಖ್ಯ ವ್ಯತ್ಯಾಸವೆಂದರೆ, ಅಕ್ಕ ಇಡೀ ವ್ಯವಸ್ಥೆಯನ್ನೇ ಧಿಕ್ಕರಿಸಿದವಳು. ಉಳಿದವರು ವ್ಯವಸ್ಥೆಯಲ್ಲಿ ಬದಲಾವಣೆ ಬಯಸಿದವರು, ಅದಕ್ಕಾಗಿ ಶ್ರಮಿಸಿದವರು. ಅಕ್ಕ ಸಾಂಸ್ಥಿಕವಾದ ಎಲ್ಲವನ್ನೂ ವಿವಾಹ, ಕುಟುಂಬ, ಗಂಡ ಮನೆಗಳನ್ನೂ ಧಿಕ್ಕರಿಸಿದಳು. ಹಾಗೆಯೇ ದೇಹ, ಕಾಮಗಳ ಬಗೆಗಿನ ಸಾಂಪ್ರದಾಯಿಕ ನಿಲುವುಗಳನ್ನೂ ಧಿಕ್ಕರಿಸಿದವಳು. ಆದರೆ ಉಳಿದವರು ಈ ವ್ಯವಸ್ಥೆಗಳಲ್ಲಿರುವ ದೋಷಗಳನ್ನು ನಿವಾರಿಸಿ ಹೊಸತನವನ್ನು ತುಂಬಲು ಪ್ರಯತ್ನ ಮಾಡುವವರು. ಅಕ್ಕ ಮುರಿಯುತ್ತಾ ಹೋದವಳು. ಉಳಿದವರು ಮುರಿದು ಕಟ್ಟಲು ಪ್ರಯತ್ನಿಸಿದವರು. ಅಕ್ಕ ವಿವಾಹವನ್ನೇ ಧಿಕ್ಕರಿಸಿದವಳು. ಆತ ತನ್ನಿಚ್ಛೆಯಂತೆ ಇಲ್ಲ ಎಂಬ ಕಾರಣಕ್ಕಾಗಿ. ಆದರೆ ಉಳಿದ ಬಹುಸಂಖ್ಯಾತ ವಚನಕಾರ್ತಿಯರು ತಮ್ಮ ಗಂಡಂದಿರು ಶಿವಶರಣರಾಗಿ ಮತಾಂತರಗೊಂಡಾಗ ಅದನ್ನೇ ಅನುಸರಿಸಿ ಶರಣೆಯರಾದವರು. ಪತಿ ಇಚ್ಛೆಯನ್ನೇ ತನ್ನಿಚ್ಛೆ ಮಾಡಿಕೊಂಡವರು. ಇದು ಅವರಿಗಲೆ ಸುಲಭದ ಮಾರ್ಗ. ಗಂಡನನ್ನು ಅನುಸರಿಸುವ ಹೆಂಡತಿಗೆ ಸಮಾಜದಿಂದಾಗಲೀ, ಕುಟುಂಬದಿಂದಾಗಲೀ ವಿರೋಧವಿಲ್ಲ. ಹೀಗೆ ಬದಲಾದವರು, ಅದನ್ನೇ ಶ್ರದ್ಧೆಯಿಂದ ನಡೆಸಿಕೊಂಡು ಹೋದವರು.

ಅಕ್ಕ ವಿವಾಹವೆಂಬ ಸಂಸ್ಥೆಯನ್ನು ಮಾತ್ರವಲ್ಲ, ಕುಟುಂಬ ಎಂಬ ಸಂಸ್ಥೆಯನ್ನೂ ಮುರಿದವಳು. ಅವಳು ಗಂಡನನ್ನು ಮಾತ್ರವಲ್ಲ ತಂದೆ ತಾಯಿಯರನ್ನೂ ಬಿಟ್ಟು ಹೊರಟವಳು. ಇತರ ಶಿವಶರಣೆಯರೆಲ್ಲರೂ, ಒಂದಲ್ಲಾ ಒಂದು ಸಂದರ್ಭದಲ್ಲಿ ಪರಸತಿ, ಪರಧನ, ಪರಧರ್ಮ ಮತ್ತು ವ್ರತಗಳ ಬಗ್ಗೆ ಹೇಳುತ್ತಾರೆ. ಆದರೆ ಅಕ್ಕನು ಒಮ್ಮೆಯೂ ಇವುಗಳನ್ನು ಪ್ರಸ್ತಾಪಿಸುವುದಿಲ್ಲ. ಇದು ಸಹಜ, ಏಕೆಂದರೆ, ಶಿವಶರಣೆಯರಾಗಿ ಮಾರ್ಪಟ್ಟ ಈ ವಚಕಾರ್ತಿಯರು ತಮ್ಮ ಈ ಹೊಸಮನೆಯನ್ನು ಸದಾ ಸ್ವಚ್ಛವಾಗಿಟ್ಟುಕೊಳ್ಳುವ ಕಾಳಜಿಯೇ ಈ ಉಲ್ಲೇಖಗಳು. ಶರಣರಾದವರು ಹೇಗಿರಬೇಕು ? ಎಂಬುದಕ್ಕೆ ಅವರು ಕೊಡುವ ಉತ್ತರಗಳು ಇವು. ನಿಜವಾದ ಶರಣ ಯಾರು ? ನಿಜವಾದ ಪ್ರತಿ ಯಾರು ? ಯಾರೆಂದರೆ, ಈ ನಿಯಮಗಳನ್ನು ಪಾಲಿಸಿದವರು. ಉಳಿದವರು, ಅವರು ವೀರಶೈವರೇ ಆದರೂ ವೀರಶೈವತ್ವಕ್ಕೆ ಅರ್ಹರಲ್ಲ. ಎಂಬ ಸಂದರ್ಭದಲ್ಲಿ ಈ ಮಾತುಗಳು ಬರುತ್ತವೆ. ತಾವು ಕಟ್ಟುತ್ತಿರುವ ಹೊಸ ಸಂಸ್ಥೆಯನ್ನು ಇದರಿಂದ ಬಲಪಡಿಸುವ ಪ್ರಯತ್ನ ಈ ವಚನಕಾರ್ತಿಯಲ್ಲಿದೆ. ಹಾಗೆಯೇ ಪಾವಿತ್ರ್ಯದ ಬಗೆಗೆ ಇವರಿಗೆ ಶಂಕೆಯೇ ಇಲ್ಲದ ನಂಬಿಕೆಯಿದೆ. ಅಕ್ಕನಿಗೆ ಇವೆಲ್ಲಾ ಅರ್ಥವಿಲ್ಲದ ಮಾತುಗಳು. ಅವಳಿಗೆ ಈ ಯಾವ ಕಟ್ಟು ಪಾಡುಗಳೂ ಬೇಕಿಲ್ಲ. ಈ ಸಂಸಾರ ಬಂಧನಗಳು, ನಿಯಮಗಳೆಲ್ಲವೂ ತೆರಣಿಯ ಹುಳು ಕಟ್ಟಿಕೊಳ್ಳುವ ಕೋಶಗಳಂತೆ. ವಿವಾಹವೆಂಬ ಸಂಸ್ಥೆಯನ್ನು ನಿರಾಕರಿಸುವ ಅಕ್ಕ, ಕಾಮವನ್ನು ನಿರಾಕರಿಸುವುದಿಲ್ಲ. ಆದರೆ ಆ ಕಾಮ ಹೇಗಿರಬೇಕೆಂದರೆ ಅದು ತನ್ನ ತೀವ್ರತೆಯ ಪರಾಕಾಷ್ಠೆಯ ಆನಂದವನ್ನು ನೀಡುವಂತಹದಾಗಿರಬೇಕು. ಅದು ಎಲ್ಲಾ ಹೊಂದಾಣಿಕೆಯ ಸೂತ್ರಗಳ ನಡುವೆ, ಅಸಹನೀಯವಾದದ್ದನ್ನೆಲ್ಲಾ ಸಹನೀಯವಾಗಿಸಿಕೊಳ್ಳುವ ಪಾಡುಗಳ ನಡುವೆ ನಡೆವ ಅನಿವಾರ್ಯಕರ್ಮವಲ್ಲ. ಅಕ್ಕನಿಗೆ ಇದು ಚೆನ್ನನಲ್ಲಿ ಮಾತ್ರ ಸಾಧ್ಯವಾಗುವಂತಹದ್ದು. ಅವಳ ಮನಸ್ಸೆಂಬ ಮನಸ್ಸು ಅವನಲ್ಲಿ ಸಂಪೂರ್ಣ ಲೀನವಾದಾಗಲೇ ಕಾಮದ ತೀವ್ರತೆಯನ್ನು ಅನುಭವಿಸಲು ಸಾಧ್ಯವಾಗುತ್ತದೆ. ಹಾಗೆಯೇ ಪಾವಿತ್ರ್ಯ ಕುರುತಾದ ಅವಳ ನಂಬಿಕೆ, ಅಕ್ಕ ದೇಹದ ಬಗ್ಗೆ ತಳೆದ ನಿಲುವು ಈ ಲೋಕದ ನಿಲುವನ್ನು ಧಿಕ್ಕರಿಸುತ್ತದೆ. ಅವಳಿಗೆ ಪತಿ ಚೆನ್ನನು ಒಬ್ಬನೇ. ಆದರೆ ಆ ಪಾತಿವ್ರತ್ಯವನ್ನು ಅವಳು ದೇಹದ ಮುಖಾಂತರ ಅಳೆಯಲಾರಳು. ಈ ದೇಹವನ್ನು ನಾಯಿ ತಿಂದರೇನು ? ನೀರು ಕುಡಿದರೇನು ? ಈ ದೇಹದ ಮೇಲೆ ನಡೆಯುವ ಯಾವ ಆಕ್ರಮಣಗಳೂ ಅವಳ ಪಾತಿವ್ರತ್ಯ, ಪಾವಿತ್ರ್ಯವನ್ನು ನಾಶ ಮಾಡಲಾರವು ಎಂಬ ಅವಳ ನಿಲುವು ಸಾಮಾನ್ಯರಿಗೆ ಗಂಟಲಲ್ಲಿಳಿಯುವುದು ಕಷ್ಟ. ಇದೇ ಮಾತು ಗಂಡನ ಬಗೆಗೂ ಸಲ್ಲುತ್ತದೆ. ಈ ಲೋಕದ ಗಂಡರನ್ನೆಲ್ಲಾ ಒಲೆಯೊಳಗಿಕ್ಕು ಎಂಬುದು. ಹಾಗೆಯೇ 'ಶೀಲ ಮುಚ್ಚಿಕೊಳ್ಳಬೇಕಾದ್ದು, ಎಂಬ ನಿಮಯವಿರುವಲ್ಲಿ ಬಟ್ಟೆಗಳನ್ನು ಕಿತ್ತೆಸೆದು ಯಾವುದು ಶೀಲ ? ಎಂದು ಪ್ರಶ್ನಿಸಿದ್ದು ಇವೆಲ್ಲವೂ ಈ ಲೋಕದ ಕಟ್ಟಡುಪಾಡುಗಳ ಬಗೆಗಿನ ಅವಳ ತಿಸ್ಕಾರದ ಆತ್ಯಂತಿಕ ಸ್ಥಿತಿ. ಅಕ್ಕನ ಈ ಯಾವ ವಿಚಾರಗಳು ಉಳಿದ ಶರಣೆಯನ್ನು ಪ್ರಭಾವಿಸಿದಂತೆ ಕಾಣುವುದಿಲ್ಲ.

ರೆಮ್ಮವ್ವೆ, ಕಾಳವ್ವೆ, ಮುಕ್ತಾಯಕ್ಕೆ, ನೀಲಮ್ಮ ಮೊದಲಾದವರು ತಮ್ಮದೇ ಆದ ಕೆಲವು ಸ್ವತಂತ್ರ ನಿಲುವುಗಳನ್ನು ತಾಳುತ್ತಾರೆ. ಆದರೂ ಯಾರೂ ಇಡಿಯಾಗಿ ಈ ವ್ಯವಸ್ಥೆಯನ್ನು ಧಿಕ್ಕರಿಸುವುದಿಲ್ಲ.

ನಿಜವಾಗಿಯೂ ಈಗಿನ ಕಾಲದ ನನ್ನಂತಹ ಮಧ್ಯಮವರ್ಗದ ಹೆಂಗಸರಿಗೂ ಮತ್ತು ಈ ಇತರ ಶರಣೆಯರಿಗೂ ಹೆಚ್ಚು ಹೋಲಿಕೆ ಇದೆ. ಆ ಕಾರಣಕ್ಕೇ ನಾವು ಅಕ್ಕನನ್ನು ನೋಡಿ ಬೆರಗಾಗುತ್ತೇವೆ. ನಮಗೆ ವ್ಯವಸ್ಥೆಯನ್ನು ಬದಲಾಯಿಸಬೇಕೆಂಬ ತುಡಿತವಿದೆ. ಆದರೆ ವ್ಯವಸ್ಥೆಯನ್ನು ಧಿಕ್ಕರಿಸುವುದಿಲ್ಲ. ಪರಧನ, ಪರಸತಿಯರನ್ನು ಬಯಸದಿರ್ಪುದೇ ಸೇಮ ಎನ್ನುತ್ತಾರೆ. ಅವರಲ್ಲಿ ಕನಿಷ್ಟ ಪ್ರಗತಿಪರರೆಂದೆನಿಸಿಕೊಂಡವರಾದರೂ ಕೆಲವು ಆದರ್ಶನಗಳನ್ನಿಟ್ಟುಕೊಳ್ಳಬೇಕೆಂದು ಬಯಸುತ್ತೇವೆ. ನಾವು ಯುದ್ಧದ ಹಿಂಸೆಯನ್ನು ತೀವ್ರವಾಗಿ ವಿರೋಧಿಸುತ್ತಲೇ, ಭವಿಷ್ಯದ ಬಗ್ಗೆ ಯೋಚಿಸು ಅಂತ ಇನ್ನಿಲ್ಲದ ಭಯ, ಹಿಂಸೆಗಳನ್ನು ಮಕ್ಕಳ ತಲೆಯಲ್ಲಿ ತುರುಕುತ್ತಿರುತ್ತೇವೆ. ಏಕೆ ಮಕ್ಕಳ ಭವಿಷ್ಯದ ಬಗ್ಗೆ ನಮಗೀ ಭಯ ? ವ್ಯವಸ್ಥೆಯನ್ನು ಅಪ್ಪಿಕೊಂಡಿರುವುದಕ್ಕೆ ಪರಸತಿ ವ್ಯಾಮೋಹವನ್ನು ಟೀಕಿಸುವ ಈ ಶರಣೆಯರು ಜಂಗಮ ಬಯಸಿದಲ್ಲಿ ಆತನಿಗೆ ತನ್ನ ಹೆಂಡತಿಯನ್ನು ಅರ್ಪಿಸಬೇಕೆಂಬ ಶರಣರ ನಿಲುವನ್ನು ತೀವ್ರವಾಗಿ ಪ್ರತಿಭಟಿಸಲು ಸಾಧ್ಯವಾಗುವುದಿಲ್ಲ. ಹಾಗೆಯೇ ನೀತಿಬಾಹಿರ ವೀರಶೈವರ ವಿವಿಧ ಚಟುವಟಿಕೆಗಳನ್ನು ಸಹಿಸಿಕೊಳ್ಳಲೂ ಆಗುವುದಿಲ್ಲ. ಅವರ ಈ ಚಡಪಡಿಕೆಯ ಮೂಲವೆಲ್ಲಿದೆಯೆಂದರೆ, ಶರಣ ಸಂಸ್ಥೆಯನ್ನು ಶ್ರದ್ಧೆಯಿಂದ ಅಪ್ಪಿಕೊಂಡಿರುವುದಲ್ಲದೇ, ಅಕ್ಕ ಎಂದೂ ಈ ಸಮೂಹದ ಭಾಗವನ್ನು ಪ್ರತಿನಿಧಿಸುವುದಿಲ್ಲ.

ಆದರೆ ಈ ಶರಣೆಯರು ಶರಣ ಸಂಸ್ಥೆಯ ಇಟ್ಟಿಗೆಗಳಾದವರು. ಅವನ್ನು ಜತನದಿಂದ ಕಾಪಾಡಿಕೊಳ್ಳಬಯಸಿದರು. ಸಂಸ್ಥೆಯ ನಿಯಮಕ್ಕೆ ಎರವಾದರನ್ನು ಖಂಡಿಸುವ ಧೈರ್ಯ ಅವರಿಗೆ ಬರುವುದೇ ಈ ಕಾರಣಕ್ಕೆ. ಈ ಕಾರಣಕ್ಕೆ ಕಾಲಾಂತರದಲ್ಲಿ ಇವರು ಸ್ಥಾವರಗಳಾಗುತ್ತಾರೆ.

ಆದರೆ ಅಕ್ಕ ಇದಕ್ಕೆಲ್ಲಾ ಎರವಾದವಳು. ಸ್ವ ಅನನ್ಯತೆ ಮೆರೆದವಳು. ಹಿಡಿತಕ್ಕೆ ಸಿಗಲಾರದವಳು. ನಮ್ಮ ಬೆರಗುಗಳಿಗೆ ಚಿಕ್ಕದೊಂದು ಅಸೂಯೆಗೆ ಕಾರಣಳಾದವಳು. ಅಕ್ಕ ತಾನದು ಆರಿಸಿಕೊಂಡ ಜೀವನದ ಸಂದರ್ಭದಲ್ಲಿ ತಾನು ಅನುಭವಿಸಿದ ಅನುಭವಗಳು, ಎದುರಿಸಿದ ಸಮಸ್ಯೆಗಳು ಇವೆಲ್ಲಕ್ಕೂ ವಚನಗಳಲ್ಲಿ ರೂಪಕೊಟ್ಟಳು. ಮನಸ್ಸಿನ ಅತಿ ಗೂಢತರ ಸ್ತರಗಳನ್ನು ಹುಡುಕುವ, ಅದನ್ನು ಭಾಷೆಯಾಗಿಸುವ ಅವಳ ಪ್ರಯತ್ನದಿಂದ ಹುಟ್ಟಿದ ವಚನಗಳು ಉತ್ತಮ ಕಾವ್ಯಕ್ಕೆ ಮಾನದಂಡಗಳಾಗಿವೆ.

ಅಕ್ಕಮಹಾದೇವಿಯನ್ನು ಕುರಿತು ತಮ್ಮ ಅಧ್ಯಯನದಲ್ಲಿ ಎನ್. ಗಾಯತ್ರಿರವರು ಹೇಳಿಕೆಯಂತೆ ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಮೊದಲ ಹಾಗೂ ಶ್ರೇಷ್ಠ ಕವಿಯಾಗಿ ಕಾಣಿಸಿಕೊಂಡ ಅಕ್ಕಮಹಾದೇವಿ ಹೋರಾಟದ ಬದುಕಿಗೆ ಮತ್ತು ದಿಟ್ಟತನದ ಅಭಿವ್ಯಕ್ತಿಗೆ ಹೆಸರಾದವಳು. ಈ ಕಾರಣದಿಂದಲೇ ಇಂದಿಗೂ ಸ್ತ್ರೀವಾದಿಗಳಿಗೂ ಮತ್ತು ಸಾಹಿತ್ಯಸಕ್ತರಿಗೂ

ಸಮನಾಗಿಯೇ ಆಕರ್ಷಣೆಯನ್ನೂ, ಆಸಕ್ತಿಯನ್ನೂ ಮೂಡಿಸುತ್ತಾ ಬಂದವಳು. ಸಮಕಾಲೀನವಾದ ಚರ್ಚೆಗೆ ಚಿಂತನ – ಮಂಥನಕ್ಕೆ ಗ್ರಾಸವಾಗುತ್ತಾ ಕುತೂಹಲವನ್ನು ಉಳಿಸಿಕೊಂಡು ಬಂದಿರುವಳು. ಚರಿತ್ರೆಯ ಪುಟಗಳಲ್ಲಿ ಆಗಿ ಹೋಗಿರುವ 'ಅಕ್ಕ'ನನ್ನು ಅವಳ ಸಮಕಾಲೀನ ಶರಣ ಸಂಸ್ಕೃತಿಯ ಹಿನ್ನೆಲೆಯನ್ನಿಟ್ಟು ಪ್ರಯತ್ನವಾಗಿ ಕೆಲವು ವಿಚಾರಗಳನ್ನು ಇಲ್ಲಿ ಪ್ರಸ್ತಾಪಿಸಬಹುದು. ವಚನ ಚಳುವಳಿ ಮೂಲತಃ ಧಾರ್ಮಿಕ ಚಳುವಳಿಯಾಗಿ ಕಂಡರೂ ಅವರ ಸಾಮಾಜಿಕ ಸಾಹಿತ್ಯಿಕ ಆಯಾಮಗಳನ್ನು ಗೌಣವಾಗಿಸಲು ಸಾಧ್ಯವೇ ಇಲ್ಲ. ಹಾಗೆಯೇ ಚಳವಳಿ ಎನ್ನುವ ಪದವನ್ನು ಬಳಸುವಾಗಲೂ ಅದಕ್ಕೆ ಏಕಸೂತ್ರವನ್ನು, ಏಕೆ ಮೀಮಾಂಸೆಯನ್ನು ಆರೋಪಿಸುವುದು ಕಷ್ಟವಾಗುತ್ತದೆ.

ಹಾಗೆಯೇ ಈ ಚಳುವಳಿಯಲ್ಲಿ ಭಾಗವಹಿಸಿದ ಶಿವಶರಣೆಯರು ರಚಿಸಿದ ವಚನಗಳ ವೈವಿಧ್ಯಕ್ಕೆ ಅವರ ಕೌಟುಂಬಿಕ, ಸಾಮಾಜಿಕ ಹಿನ್ನೆಲೆ ಮತ್ತು ವ್ಯಕ್ತಿಗತ ಪ್ರತಿಭೆಗಳು ಕಾರಣವೆನ್ನುವುದರಲ್ಲಿ ಎರಡು ಅಭಿಪ್ರಾಯವಿರಲು ಸಾಧ್ಯವೇ ಇಲ್ಲ.

ವಚನಕಾರರ ಮಧ್ಯೆ ಅಕ್ಕ ವಿಶಿಷ್ಟವಾಗಿ ಎದ್ದು ನಿಲ್ಲುವಂತಹವಳು. ಹೆಣ್ಣೆಂಬ ಕಾರಣಕ್ಕಾಗಿ ಮಾತ್ರವಲ್ಲದೆ, ತನ್ನ ಕಾಲದ ಇತರ ವಚನಕಾರ್ತಿಯರಿಗಿಂತಲೂ ಭಿನ್ನಳಾದವಳು. ಒಟ್ಟು ವಚನ ಸಾಹಿತ್ಯದ ಹಿನ್ನೆಲೆಯಲ್ಲಿಯೇ ತನ್ನ ಅಪರೂಪದ ಸಾಹಿತ್ಯ ಶಕ್ತಿಯಿಂದಾಗಿ ಅಕ್ಕ ಮುಖ್ಯಳಾದವಳು.

ದಿಟ್ಟ ಹೋರಾಟಗಾರ್ತಿಯಾಗಿ ಮತ್ತು ಅಪರೂಪದ ಕವಿಯಾಗಿ ಒಡಮೂಡುವ ಅಕ್ಕನ ವಚನಗಳು ಕಾಲದ ಪ್ರವಾಹದಲ್ಲಿ ಕೊಚ್ಚಿ ಹೋಗದೆ ಇಂದಿಗೂ ಪ್ರಸ್ತುತವಾಗಿವೆ. ಕನ್ನಡದ ಮೊಟ್ಟ ಮೊದಲ ಕವಯಿತ್ರಿ ಅಕ್ಕಮಹಾದೇವಿ ಮುಖ್ಯವಾಗಿ ಎರಡು ನೆಲೆಯಲ್ಲಿ ಇಂದಿಗೂ ಪ್ರಸ್ತುತಳಾಗಿದ್ದಾಳೆ. ಒಂದು ಬದುಕಿನ ಹೋರಾಟದಲ್ಲಿ ಅಪರೂಪದ ದಿಟ್ಟೆಯಾಗಿ ಬಾಳಿದ್ದಕ್ಕಾಗಿ, ಮತ್ತೊಂದು ತನ್ನ ಕಾಲದಲ್ಲೇ ಮೆಚ್ಚುಗೆ ಗಳಿಸಿ ಇಂದಿನ ಪೀಳಿಗೆ ಬರಗಾರರಿಗೂ ಮಾದರಿಯಾದ ಸೃಜನಶೀಲ ಪ್ರತಿಭೆಗಾಗಿ ಅವಳ ವ್ಯಕ್ತಿತ್ವದಲ್ಲಿ ನಾಯಕತ್ವದ ಪ್ರತಿಭೆಯಿಲ್ಲ. ಆದರೂ ಅವಳು ಬದುಕಿದ ರೀತಿ ಮತ್ತು ವಚನ ರಚಿಸಿದ ಶೈಲಿ ಇಂದಿನ ಆಧುನಿಕ ಮಹಿಳೆಯರ ಮೇಲೂ ಪ್ರಭಾವ ಬೀರಿತು.

ಅಕ್ಕನ ಬರಹ ಮತ್ತು ಬದುಕಿನ ಗ್ರಹಿಕೆಗಳು ಅವಳದೇ ವಿಶಿಷ್ಟ ಎನಿಸುವಷ್ಟು ವ್ಯಕ್ತಿಗತ ಪ್ರತಿಭೆಯಿಂದ ಕೂಡಿವೆ. ಅವಳ ಬದುಕು ಬರಹಗಳಲ್ಲಿ ವ್ಯಕ್ತಿಗತ ಹೋರಾಟ ಮತ್ತು ಸಾಧನೆಗೆ ಒತ್ತು ಜಾಸ್ತಿಯಿದೆ. ಸಾಮಾಜಿಕ ಎನ್ನಬಹುದಾದ ಕಾಳಜಿಗಳು ಸ್ವಲ್ಪ ಕಡಿಮೆ ಇವೆ. ಆದ್ದರಿಂದಲೇ ಅವಳು ತನ್ನ ಸಮಕಾಲೀನ ಶರಣ – ಶರಣೆಯರ ಪ್ರತಿನಿಧಿಯಾಗುವುದಿಲ್ಲವೆಂಬ ಅಭಿಪ್ರಾಯಗಳನ್ನು ಈಗಾಗಲೇ ಹಲವರು ಚಿತ್ರಿಸಿದ್ದಾರೆ. ಈ ಮಾತುಗಳಲ್ಲಿ ಬಹುಪಾಲು ಸತ್ಯ. ಆದರೂ ಅಕ್ಕ ಅವಳ ಕಾಲದ ಆಶೋತ್ತರಗಳಿಗೆ, ನಾಡಿ ಮಿಡಿತಕ್ಕೆ ಹೊರಗಿನವಳಾಗಿಯೇನೂ ನಿಲ್ಲುವುದಿಲ್ಲ. ೧೨ನೆಯ ಶತಮಾನದಲ್ಲಿ ಈ ನಾಡಿನಲ್ಲಿ ನಡೆದ ಎಲ್ಲ ತಲ್ಲಣ, ಬದಲಾವಣೆಗಳ ನಡುವೆಯೇ ಅರಳಿ ನಿಂತ ವಿಶಿಷ್ಟ ಪ್ರತಿಮೆ ಅಕ್ಕನದು. ಅಕ್ಕನ ಹೋರಾಟದ ಬದುಕನ್ನು ಮತ್ತು

ಅವಳ ದಿಟ್ಟ ಬರವಣಿಗೆಯನ್ನು ಬೇರ್ಪಡಿಸಿ ಅಭ್ಯಸಿಸುವುದೇ ಸಾಧ್ಯವೇ ಇಲ್ಲವೆನ್ನುವಷ್ಟು ಕಷ್ಟವಾಗುತ್ತದೆ. ಸಾಹಿತ್ಯದ ಗತಿ ಚರಿತ್ರೆಯ ಗತಿಯನ್ನು ಅವಲಂಬಿಸಿರುತ್ತದೆ. ಎಂಬುದನ್ನು ತಳ್ಳಿಹಾಕುಲಾಗುವುದಿಲ್ಲ. ಸಾಹಿತ್ಯವು ಸಾಮಾಜಿಕ ವ್ಯವಸ್ಥೆಯೊಂದರ ತಲ್ಲಣಗಳನ್ನು ಯಥವತ್ತಾಗಿ ಪ್ರತಿಬಿಂಬಿಸುತ್ತದೆಂದು ಹೇಳಲಾಗುವುದಿಲ್ಲ. ಸಾಹಿತ್ಯಿಕ ಬದಲಾವಣೆಯು ಸಾಮಾಜಿಕ ಬದಲಾವಣೆಗಿಂತಲೂ ಮುಂಚಿತವಾಗಿಯೇ ಬಂದು ಬಿಡಬಹುದು. ಇಲ್ಲವೇ ನಂತರದಲ್ಲಿ ಹಿಂಬಾಲಿಸಬಹುದು. ಅಕ್ಕನ ಬರವಣಿಗೆ ಉಳಿದ ಶರಣ – ಶರಣೆಯರಿಗಿಂತ ತೀರ ಭಿನ್ನ ಮತ್ತು ವಿಶಿಷ್ಟವಾದುದು. ಎನ್ನವಾಗಲೂ ಅವಳು ತನ್ನ ಕಾಲದ ಯಾವ ಪ್ರಭಾವಗಳನ್ನು ಒಳಗೊಂಡಿಲ್ಲ ಎಂದರೆ ಅಚಾರಿತ್ರಿಕವಾಗುತ್ತದೆ. ನನಗೆ ತೀವ್ರವಾಗಿ ಅನ್ನಿಸುವುದೆಂದರೆ, ವಚನ ಚಳುವಳಿಯ ಹಿನ್ನಲೆಯಲ್ಲಿಯೂ ಅಕ್ಕನ ವ್ಯಕ್ತಿತ್ವ ಈಗ ಹೇಗಿದೆಯೋ ಹಾಗೆ ಇರುತ್ತಿತ್ತು. ಎನ್ನುವುದು ಯಾವುದೇ ಕಾಲದ ಎಷ್ಟೇ ಕಠಿಣವಾದ ಸವಾಲುಗಳನ್ನು ಬೇಕಾದರೂ ಎದುರಿಸಬಲ್ಲಷ್ಟು ಶಕ್ತವಾದ ಸ್ವಯಂಭುವಾದ ವ್ಯಕ್ತಿತ್ವ ಅವಳದು ಎನ್ನುವ ಎಂ.ಎಸ್. ಆಶಾದೇವಿಯವರ ಅಭಿಪ್ರಾಯವನ್ನು ಒಪ್ಪುವುದು ಕಷ್ಟವಾಗುತ್ತದೆ.

ಅಕ್ಷರ ಜ್ಞಾನದಿಂದ ವಂಚಿತರಾದ ಮಹಿಳೆ ಮತ್ತು ಕೆಳಜಾತಿ, ವರ್ಗದವರಿಗೆ ಬರಹವೇ ಮೊದಲ ಪ್ರತಿಭಟನೆ. ಹೀಗಾಗಿ ವಚನ ಚಳುವಳಿ ಅಂಚಿಗೆ ತಳ್ಳಲ್ಪಟ್ಟವರ ಸಮೂಹದ ಬರಹಗಳ ಮೂಲಕ ನಡೆದ ಬೌದ್ಧಿಕ ಪ್ರತಿಭಟನೆಯಾಗಿ ಆರಂಭವಾಯಿತು. ಇಂತಹ ಪ್ರತಿಭಟನೆಯಲ್ಲಿ ಮುಖ್ಯವಾಗಿ ಕಾಣಿಸಿಕೊಳ್ಳುವ ಅಕ್ಕ ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ತನ್ನದೇ ಪ್ರತಿಭಟನೆಯನ್ನು ವಿಶಿಷ್ಟ ರೀತಿಯಲ್ಲಿ ನಡೆಸಿದವಳು. ಸಮಾಜವು ಕಲ್ಪಿಸಿದ ಸಂಕೋಲೆಗಳನ್ನು ಧಿಕ್ಕರಿಸಿ, ತನ್ನನ್ನು ನಗ್ನಗೊಳಿಸಿಕೊಂಡು ಸಮಾಜದ ಮುಖಕ್ಕೆ ರಾಚುವಂತೆ ಪ್ರತಿಭಟಿಸುವ ಅಕ್ಕನ ಪ್ರತಿಭಟನೆಯ ರೀತಿ ವಿಶಿಷ್ಟವಾದುದು.

ಅಕ್ಕನ ನಗ್ನತ್ವವನ್ನೂ, ಅದನ್ನು ಪ್ರತಿಭಟನೆಯ ಅಸ್ತ್ರವಾಗಿಸಿಕೊಂಡದ್ದರ ಬಗ್ಗೆ ನಮ್ಮಲ್ಲಿ ಸಾಕಷ್ಟು ವಿವಾದಗಳಿವೆ. ಅದು ಒಂದು ಐತಿಹ್ಯ ಎಂದು ಹೇಳಬಹುದು. ಒಂದು ರೂಪಕ ಆಗಿರಬಹುದು ಅಥವಾ ವಾಸ್ತವವೇ ಆಗಿರಬಹುದು. ಅದೇನೇ ಇದ್ದರೂ ಇಲ್ಲಿ ಅಕ್ಕ, ಬೆತ್ತಲೆಯಾಗುವ ಕ್ರಿಯೆಯನ್ನು ಒಂದು ಪ್ರತಿಭಟನೆಯ ಅಸ್ತ್ರವಾಗಿ ಕಂಡಳು ಎನ್ನುವುದು ಮುಖ್ಯ. ನಮ್ಮಲ್ಲಿ ಹೆಣ್ಣನ್ನು ಬೆತ್ತಲೆಗೊಳಿಸಿ ಅವಮಾನಿಸುವುದು, ಶಿಕ್ಷಿಸುವುದು ಪುರುಷ ಲೋಕದ ಒಂದು ಅಹಂಕಾರದ ಕ್ರಮವಾಗಿದೆ. ಕುದುರೆ ಮೋತಿ ಪ್ರಕರಣ, ಬಳ್ಳಾರಿಯ ಎರ್ರಮ್ಮನ ಪ್ರಕರಣ ಮುಂತಾದ ಪ್ರಕರಣಗಳು ಹೆಣ್ಣನ್ನು ಶಿಕ್ಷಿಸಲೆಂದೇ ಬೆತ್ತಲೆಗೊಳಿಸಿದ ಪ್ರಕರಣಗಳಾಗಿವೆ. ಆದರೆ ಹೆಣ್ಣು ತಾನು ವಿವಸ್ತ್ರಳಾಗಿ ಪುರುಷನಿಗೆ ಎದುರೇಟು ಹಾಕಿದರೆ ಅದೆಂತಹ ಉಗ್ರ ಪ್ರತಿಭಟನೆಯಾಗಬಲ್ಲದು ಎಂಬುದನ್ನು ಇತ್ತೀಚಿನ ಮಣಿಪುರದ ಮಹಿಳೆಯರ ಬೆತ್ತಲೆ ಪ್ರಕರಣದಲ್ಲಿ ಕಂಡಿದ್ದೇವೆ. ಅಕ್ಕ ತನ್ನನ್ನು ಬೆತ್ತಲೆಗೊಳಿಸಿಕೊಂಡಿದ್ದರ ಹಿಂದೆಯೂ ಇಂಥದ್ದೇ ವೈಯಕ್ತಿಕ ಒತ್ತಡಗಳು ಕೆಲಸ ಮಾಡಿವೆ. ಅಂದಿನ ಸಾಮಾಜಿಕ ಸಂಪ್ರದಾಯದ ವಿರುದ್ಧ

ಪುರುಷಸತ್ತೆಯನ್ನೂ ಪ್ರತಿಭಟಿಸಿ, ತನ್ನದೇ ಜೀವನ ಮಾರ್ಗವನ್ನು ಆಯ್ಕೆ ಮಾಡಿಕೊಂಡು, ಹಾದಿಯಲ್ಲಿ ಬಂದದ್ದೆಲ್ಲವನ್ನೂ ಪಕ್ಕಕ್ಕೆ ತಳ್ಳಿ, ಬೆತ್ತಲೆಯಾಗಿ ಹೊರಟ ಮಹಾದೇವಿ ನಿಜವಾಗಿಯೂ ವ್ಯಕ್ತಿ ಸ್ವಾತಂತ್ರ್ಯದ ಪ್ರತಿಪಾದಕಿ.

ವಿವಸ್ತ್ರಳಾಗುವ ಅಕ್ಕನ ಕ್ರಿಯೆಯನ್ನು ಕೇವಲ ವೈಯಕ್ತಿಕ ಕ್ರಿಯೆಯೆಂದು ಭಾವಿಸುವುದು ಸಾಧ್ಯವಿಲ್ಲ. ಇಂತಹ ಒಂದು ಪ್ರತಿಭಟನೆಯ ಕಾರ್ಯದ ಹಿಂದೆ ವೈಯಕ್ತಿಕ ತುರ್ತು ಇದ್ದರೂ, ಸಮಾಜದ ಒಪ್ಪಿತ ನಿಯಮವನ್ನು ಧಿಕ್ಕರಿಸುವ ಮೂಲಕ ಸಾಮಾಜಿಕ ಬಂಡುಕೋರಳಾಗಿಯೂ ಅಕ್ಕ ಮುಖ್ಯವಾಗುತ್ತಾಳೆ. ಲೌಕಿಕ ನೆಲೆಯಲ್ಲಿ ಅಕ್ಕನ ಈ ಘಟನೆ ಏನೇ ಅರ್ಥವನ್ನು ಪಡೆದುಕೊಂಡರೂ, ಶರಣರ ವ್ಯಾಖ್ಯಾನದಲ್ಲಿ ಇದು ಪಾರಮಾರ್ಥಿಕ ಧ್ವನಿಯನ್ನು ಪಡೆಯುವುದುನ್ನು ಕಾಣಬಹುದು. ತನ್ನ ದೇಹದ ನಿರಾಕರಣೆಯನ್ನು ಮಾಡುತ್ತಲೇ ಈ ಲೋಕದ ನೋವಿನಿಂದ ಮುಕ್ತಳಾಗಬಯಸುವ ಅಕ್ಕನಿಗೆ ಈ ಹೆಣ್ಣು ದೇಹವೇ ಸಮಸ್ಯೆಯ ಮೂಲವಾಗುತ್ತದೆ.

ಆಧುನಿಕ ಸ್ತ್ರೀವಾದಿಗಳ ಸ್ತ್ರೀ ಶೋಷಣೆಯ ಮೀಮಾಂಸೆಯ ಬೇರನ್ನು ಅಕ್ಕನ ವಚನಗಳಲ್ಲಿ ಗ್ರಹಿಸಬಹುದು.

ಪುರುಷ ಲೋಕದಲ್ಲಿ ಗಂಡನನ್ನು ಬಿಟ್ಟು ಹೆಣ್ಣಾದವಳು ಅಲೌಖಿಕ ಗಂಡನ ಅನ್ವೇಷಣೆಯಲ್ಲಿ ತನ್ನತನವನ್ನು ಸ್ಥಾಪಿಸಿಕೊಂಡ ಪರಿ, ಅನ್ವೇಷಣೆ ಹಾಗೂ ಪ್ರಯೋಗಶೀಲತೆಯು ಇಡೀ ವಚನ ಚಳುವಳಿಯ ಸ್ವರೂಪವಾಗಿದೆ. ಅಕ್ಕ ಇದಕ್ಕೆ ಹೊರತಾಗಲಿಲ್ಲ. ಅಲೌಕಿಕ ಗುರುವಿನ ನಿರಂತರ ಹೋರಾಟದಲ್ಲಿ ಲೌಕಿಕ ಕಷ್ಟಗಳನ್ನು ಜಯಿಸುತ್ತಾ, ಹೋರಾಟದ ಬದುಕು ನಡೆಸಿದ ಅಕ್ಕನ ಜೀವನವೇ ಕಾಮ್ಯವಾಗಿದೆ. ಈ ಹೋರಾಟದ ತೀವ್ರತೆ ಅಕ್ಕನ ಕಾವ್ಯಕ್ಕೆ ಒಂದು ರೀತಿಯ ವಿಸ್ಮಯ, ನಿಗೂಢತೆಯನ್ನು ತಂದುಕೊಟ್ಟಿದೆ. ಅವಳ ವಚನಗಳು ನಮ್ಮ ಕಣ್ಣ ಮುಂದೆ ಶಬ್ದ ಚಿತ್ರವಾಗಿ ಬಿಚ್ಚಿಕೊಳ್ಳುತ್ತದೆ.

ಕನ್ನಡ ಸಾಹಿತ್ಯ ಪರಂಪರೆಯಲ್ಲಿ ವಚನದ ಓದಿಗೆ ಒಂದು ವಿಶಿಷ್ಟ ತಿರುವು ಸಿಕ್ಕಿದ್ದೇ ಎಪ್ಪತ್ತರ ದಶಕದ ನಂತರ. ಸಾಮಾಜಿಕ ಕಾರಣಗಳೂ ಇದಕ್ಕಿವೆ. ವಿಶೇಷವಾಗಿ ಅಕ್ಕ ಆಧುನಿಕ ಕವಯತ್ರಿಯರಿಗೆ ಒಂದು ಸವಾಲು ಆಗುತ್ತಾಳೆ.

ಅವಳ ಬದುಕು – ಬರಹಗಳು ಅವರನ್ನು ರೋಮಾಂಚನಕಾರಿ ರೀತಿಯಲ್ಲಿ ಪ್ರಭಾವಿಸಿವೆ. ಅವಳ ಬದುಕಿನ ಸಂಧಿಗ್ಧತೆಗಳು ವಚನದಲ್ಲಿನ ದ್ವಂದ್ವ ಅಭಿವ್ಯಕ್ತಿಗೆ ಕಾರಣವಾಗಿದೆ. 'ಮಹಾದೇವಿಯು ಅನೇಕ ನೆಲೆಗಳಲ್ಲಿ ಪುರುಷ ಷಾಹಿಯನ್ನು ಮೀರಲು ಪ್ರಯತ್ನಿಸಿದ್ದಾಳೆ. ಅಕ್ಕನಿಗೆ 'ಮೀರುವ', 'ದಾಟುವ' ಕ್ರಿಯೆಗೆ ಬೇಕಾದ ಸತ್ವವನ್ನು ವಚನ ಸಂಸ್ಕೃತಿಯೇ ನೀಡಿತು ಎಂಬುದೂ ಸಹ ಗಮನಿಸಬೇಕಾದ ಸಂಗತಿಯಾಗಿದೆ. ಅಕ್ಕ ಭಿನ್ನ ವ್ಯಕ್ತಿತ್ವದವಳಾಗಿ ಕಂಡು ಬರುವುದಕ್ಕೆ ಅವಳ ಸಾಮಾಜಿಕ ಹಿನ್ನಲೆ ಮುಖ್ಯ ಕಾರಣ. ಶರಣ ಚಳವಳಿಯು ಸಮೂಹ ಚಳುವಳಿಯಾಗಿದ್ದರೂ, ಅದರಲ್ಲಿ ಭಾಗವಹಿಸಿದ ಶರಣ – ಶರಣೆಯರು ಪ್ರತಿನಿಧಿಸುವ ವಿಭಿನ್ನ

ಸಾಮಾಜಿಕ ಸ್ತರ, ತಾತ್ವಿಕ ಹಿನ್ನೆಲೆ ಮತ್ತು ವೈಯಕ್ತಿಕ ಪ್ರತಿಭೆಗಳಲ್ಲಿನ ಭಿನ್ನತೆಯ ಕಾರಣದಿಂದಾಗಿ ವಚನ ಸಾಹಿತ್ಯದಲ್ಲೂ ವೈವಿಧ್ಯ ಸಾಧ್ಯವಾಗಿದೆ. ಕೆಲವೊಮ್ಮೆ ಅವಳ ಸಮಕಾಲೀನ ವಚನಕಾರ್ತಿಯರು ಅಕ್ಕನಿಗಿಂತ ಹೆಚ್ಚು ಕ್ರಾಂತಿಕಾರಿಗಳಾಗಿಯೂ, ಸಮಾಜಮುಖಿಗಳಾಗಿಯೂ, ತಾತ್ವಿಕ ಸ್ಪಷ್ಟತೆಯುಳ್ಳವರಾಗಿಯೂ ಕಂಡು ಬರುತ್ತಾರೆ.

ಅಸ್ಪಶ್ಯ ಜಾತಿಯ ನೆಲೆಯಲ್ಲಿ ಮೂಡಿಬಂದ ವಚನಕಾರ್ತಿ ಕಾಳವ್ವೆಯ ಬರಹದ ಅಭಿವ್ಯಕ್ತಿಯ ಸಮಸ್ಯೆಯೇ ಬೇರೆ. ಅಕ್ಕನ ಬದುಕೇ ಒಂದು ಹೋರಾಟ. ಆ ಹೋರಾಟದ ಗುರಿಯೇ, ತನು, ಮನದ ವಿಚಾರಗಳನ್ನು ಗೆಲ್ಲುವ ಬಯಕೆ.

ಆಧುನಿಕ ಕವಯತ್ರಿಯರು ಇಲ್ಲಿಯವರೆಗೆ ನಡೆಸಿರುವ ಸ್ತ್ರೀಪರ ಅಧ್ಯಯನಗಳು ಒಂದು ರೀತಿಯಲ್ಲಿ ಸ್ತ್ರೀಯರಿಗೆ ಉಪಯುಕ್ತವಾಗಿವೆ. ಮಹಿಳೆಯರ ಬದುಕಿನ ಹೊರಳು ಹಾದಿಯಲ್ಲಿರುವ, ನಮ್ಮಗಳ ಇದಿರು ತೆರೆದುಕೊಂಡಿರುವ ಲೋಕ ಸಂಕೀರ್ಣ ಮತ್ತು ಆತಂಕಪೂರಿತವಾಗಿದೆ. ಮಹಿಳೆ ಕತ್ತಲು ಗುಹೆಯಿಂದ ಅಕ್ಷರದ ಬಯಲು ಬಾಗಿಲಿಗೆ ಬಂದು ನಿಂತಿರುವುದರ ಹಿಂದೆ ಹಲವು ಸಂಘರ್ಷಗಳಿವೆ. ಅಸಂಖ್ಯ ನೋವು ಹಾಗೂ ಮೌನಗಳಿವೆ. ಈ ಸಂಘರ್ಷ, ಮೌನ, ನೋವುಗಳೆಲ್ಲಾ ನಮ್ಮವರಿಗೆ ಪ್ರಾಯೋಗಿಕ ಪಠ್ಯವಾಗಬೇಕಿದೆ. ಅಕ್ಕನಂಥವರ ಬದುಕು ಸ್ತ್ರೀ ಸಮುದಾಯಕ್ಕೆ ಸ್ವಾಭಿಮಾನ, ಅರಿವುಗಳ ಸಂಕೇತವಾಗಿ ನಿಲ್ಲಬೇಕು. ೮೦೦ ವರ್ಷಗಳ ಹಿಂದೆ, ಶ್ರೇಣೀಕೃತ ವ್ಯವಸ್ಥೆಯ ಮಧ್ಯದಲ್ಲಿ ಬದುಕಿಯೂ ಅಪಾರ ಸವಾಲುಗಳಿಗೆ ಒಡ್ಡಿಕೊಂಡಿರುವ ಅಕ್ಕ ಇವತ್ತಿಗೂ ಧಾರ್ಮಿಕ ಅಥವ ಶಾಬ್ಧಿಕ ವಲಯದ ವೈಭವವೂ ಮಾತ್ರವಾಗಿ ಒದಗಿ ಬಂದರೆ ಏನು ಪ್ರಯೋಜನ ? ಒಂದೆಡೆ ಮತೀಯ ಪರಂಪರೆಯ ವಲಯದಲ್ಲಿ ಮಹಾದೇವಿಯಕ್ಕ, ಅಕ್ಕನ ಬಳಗಗಳ ಆರಾಧನೆಗೆ, ವಿಚಾರ ರಹಿತ ಭಾವುಕ ಭಕ್ತರ ಭಜನೆಗೆ ಬಳಕೆಯಾದರೆ, ಇನ್ನೊಂದೆಡೆ ವಿದ್ವತ್ ಲೋಕದ ಸಾಹಿತ್ಯ ಮೀಮಾಂಸೆಯ ಕಸರತ್ತಿನಲ್ಲಿ ಕಳೆದು ಹೋಗುತ್ತಿದ್ದಾಳೆ. ತುಂಬಾ ಸರಳ ಮತ್ತು ಪ್ರಖರವಾಗಿರುವ ಅಕ್ಕನ ಬದುಕನ್ನು ಈ ಹೊತ್ತಿಗೆ ಬದುಕಿಗೆ ಒದಗಿ ಬರಲು ಜೀವಸೆಲೆಯಾಗಿ ಹರಿಸಬೇಕಿದೆ.

ನಾವು ಪ್ರಜಾತಾಂತ್ರಿಕ ವ್ಯವಸ್ಥೆಯನ್ನು ಒಪ್ಪಿಕೊಂಡು ಅರ್ಧ ಶತಮಾನಗತಿಸಿ ಹೋಗಿದೆ. ಆದರೂ ಹಿಡಿಯಷ್ಟು ಮಹಿಳೆಯರಿಗೆ ಮಾತ್ರ ಅಕ್ಷರದ ಅವಕಾಶ ಸಿಕ್ಕಿದೆ. ಆರ್ಥಿಕ ವ್ಯವಸ್ಥೆಯ ಪಲ್ಲಟದ ಕಾರಣವಾಗಿ ಮಹಿಳೆಯರು ಮನೆಯ ಹೊರಗೂ ಉತ್ಪಾದನಾ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡಿದ್ದಾರೆ. ಆದಾಗ್ಯೂ ಅವರು ಪುರುಷ ಕೇಂದ್ರಿತ ಮೌಲ್ಯಗಳನ್ನು ಬಿಟ್ಟು ಹೊರ ಬರಲಾಗುತ್ತಿಲ್ಲ. ತಮ್ಮ ಆಗು – ಹೋಗುಗಳನ್ನು ತಾವೇ ನಿರ್ಣಯಿಸುವ ನೀತಿ ನಿರೂಪಣಾ ಶಕ್ತಿಯನ್ನು ಸಂಚಯಿಸಿಕೊಳ್ಳಲಾಗುತ್ತಿಲ್ಲ. ಆದ್ದರಿಂದಲೇ ನೂರಾರು ವರ್ಷಗಳ ಹಿಂದಿರುವ ಸ್ತ್ರೀಯರ ಸಮಸ್ಯೆಗಳು ಇಂದು ಹೊಸ ರೂಪ ಮತ್ತು ಆಕಾರ ತೊಟ್ಟಕೊಂಡು ಮತ್ತೆ ಮತ್ತೆ ವಿಜೃಂಭಿಸುತ್ತಿವೆ. ವರದಕ್ಷಿಣೆ, ಸಾವು, ಸ್ತ್ರೀಭ್ರೂಣ ಹತ್ಯೆ, ಲೈಂಗಿಕ ಕಿರುಕುಳ, ಕೌಟುಂಬಿಕ ಹಿಂಸೆ ಮುಂತಾದವುಗಳು ಪ್ರಸ್ತುತ ವ್ಯವಸ್ಥೆಯ ಅಣಕಗಳು.

ಇಂದಿಗೂ ಜೀವಂತವಿರುವ ಬಾಲ್ಯ ವಿವಾಹ ಪದ್ಧತಿ, ದೇವದಾಸಿ ಪದ್ಧತಿ, ಬಾಲ್ಯವೇಶ್ಯವಾಟಿಕೆ, ಬಹುಪತ್ನಿತ್ವ, ಆಧುನಿಕ ಬದುಕಿನ ಸವಾಲುಗಳಾಗಿವೆ. ಅಕ್ಕನಂತಹವರ ಬಹುನೆಲೆಯ ಹೋರಾಟಗಳು ಸಂಭವಿಸುತ್ತಿಇರುವ ಗಳಿಗೆಗಳಲ್ಲೂ ಮಹಿಳಾ ಮೀಸಲಾತಿ ಮಸೂದೆ ನೆನೆಗುದಿಗೆ ಬಿದ್ದಿರುವುದು ಪ್ರಜಾಪ್ರಭುತ್ವದ ವ್ಯಂಗ್ಯವಲ್ಲವೇ ? ವ್ಯವಸ್ಥೆ ಈ ಎಲ್ಲಾ ಕ್ರೌರ್ಯಗಳ ನಡುವೆ ಬದುಕುತ್ತಿರುವ ನಮ್ಮಗಳಿಗೆ ಅಕ್ಕನ ವ್ಯಕ್ತಿತ್ವ ಧಾರಣಶಕ್ತಿಯಾಗಬೇಕು. ನಮ್ಮ ಬಿಕ್ಕಟ್ಟು ಏನೆಂದರೆ, ಅಕ್ಕನ ಬದುಕು ಸಾಮಾನ್ಯ ಹೆಣ್ಣೊಬ್ಬಳು ತನ್ನ ಅಸ್ತಿತ್ವಕ್ಕಾಗಿ ಸಾರಿದ ದಂಗೆಯಾಗಿ ಗ್ರಹಿಕೆಗೆ ಬರುವುದಕ್ಕಿಂತ ಹೆಚ್ಚಾಗಿ ಆಧ್ಯಾತ್ಮಿಕ ಪಠ್ಯವಾಗಿ ಬಳಕೆಯಾಗುತ್ತಿರುವುದು. ವೈಧಿಕ ಮನಸ್ಸುಗಳಿಗೆ ಅಕ್ಕನನ್ನು ಸಂಭಾಳಿಸಿಕೊಳ್ಳುವುದು ಸಾಧ್ಯವಾಗುವುದಿಲ್ಲ. ಈ ಕಾರಣವಾಗಿಯೇ ಅವು ಒಟ್ಟು ವಚನ ಚಳುವಳಿಯನ್ನು ನವವೈಧಿಕತೆಯೊಂದಿಗೆ ಸಮೀಕರಿಸುವ ತಂತ್ರ ಹೆಣೆಯುತ್ತವೆ. ಆದರೆ ಮಹಿಳಾ ಲೋಕ ಅತ್ಯಂತ ಎಚ್ಚರದಿಂದ ಅಕ್ಕನ ಬದುಕು ಮತ್ತು ಬರಹಗಳನ್ನು ಸಾಕ್ಷಿ ಪ್ರಜ್ಞೆಯಾಗಿ ಕಾಯ್ದುಕೊಳ್ಳಬೇಕಾದ ಜರೂರಿ ಇದೆ. ಇಲ್ಲವಾದರೆ ಆಧುನಿಕತೆ, ಪರಿವರ್ತನೆಯ ನೆವದಲ್ಲಿ ಸ್ತ್ರೀಯರನ್ನು ಮತ್ತೆ ಮತ್ತೆ ಇಕ್ಕಟಿಗೆ ಸಿಲುಕಿಸುವ ಅಪಾಯ ಇದೆ. ಜಾಗತೀಕರಣ ಪ್ರಮುಖ ವಿದ್ಯಮಾನಗಳಾಗಿರುವ ಜಾಹಿರಾತು, ತಂತ್ರಜ್ಞಾನ, ವ್ಯಕ್ತಿ ಕೌಶಲ್ಯದಂಥವುಗಳು ಮಹಿಳಾ ಲೋಕದ ದಿಕ್ಕು ತಪ್ಪಿಸುತ್ತಿರುವುದನ್ನು ಈ ಹೊತ್ತು ಗ್ರಹಿಸದೆ ಹೋದರೆ ದೊಡ್ಡ ದುರಂತ ಕಾದಿದೆ.

ಆದ್ದರಿಂದ ಲೋಕ ಒಡ್ಡುವ ಹಣದ ಹುಚ್ಚು ಹೊಳೆಯಲ್ಲಿ ಕೊಚ್ಚಿ ಹೋಗುತ್ತಿರುವ ಸಮುದಾಯಕ್ಕೆ ಎಚ್ಚರಿಕೆಯ ಗಂಟೆಯಾಗಬೇಕು ಎಂದು ಅಕ್ಕ ಮತ್ತು ಸ್ತ್ರೀಪರ ಅಧ್ಯಯನಗಳ ಚಿಂತನೆಗಳಿಂದ ತಿಳಿಯಬಹುದು.

* * *

ಕನ್ನಡ ಸಾಹಿತ್ಯ ರಂಗದ ಅಂಗವಾಗಿ ನಾವು ವಿವಿಧ ಕಾಯಕಗಳಿಂದ ಬಂದ ದಿಟ್ಟ ಮಹಿಳಾ ವಚನಕಾರರು ಇರುವುದನ್ನು ನೋಡಬಹುದು. ಆದರೂ ಸಹ, ಹೆಚ್ಚಿನ ಮಾನ್ಯತೆ ದೊರೆತದ್ದು, ಪಿತೃಪ್ರಧಾನ ಮೌಲ್ಯಗಳ ಸರಹದ್ದಿನೊಳಗೇ ಭಕ್ತಿಯನ್ನು ಆಚರಿಸಿದ ಅಕ್ಕಮಹಾದೇವಿಗೆ ! ಅಕ್ಕನನ್ನು ಕುರಿತು ಹಲವಾರು ಕಥೆಗಳಿವೆ. ಅವಳ ವಚನಗಳಿಗಿಂತ ಹೆಚ್ಚು ಪ್ರಚಲಿತವಾಗಿರುವುದು ಈ ಕಥೆಗಳು. "ಸಾವಿಲ್ಲದ, ಕೇಡಿಲ್ಲದ ಚೆಲುವಂಗೊಲಿದ ಕಥೆ", "ಸಾವ ಕೆಡುವ ಗಂಡರನೊಯ್ದು ಒಲೆಯೊಳಗಿಕ್ಕು" ಎಂದು ಮನೆ – ಮಠ ಬಿಟ್ಟು ಹೊರಟ ಕಥೆ, "ಉಟ್ಟಸೀರೆಯ ಕಳಚಿ ಮುಡಿ ಬಿಟ್ಟು ದೇವರಿಗೆ ತನುಮನವನೊತ್ತೆಯಿಟ್ಟ ದಿಟ್ಟ ಹೆಜ್ಜೆಯನಿಟ್ಟು ಬೆತ್ತಲೆ ನಡೆದ ಕಥೆ", "ಮೈಮೇಲಿನ ಬಟ್ಟೆ ತೊರೆದು ಭಕ್ತಿ ಬಟ್ಟೆಯನ್ನರಸಿ ಹೊರಟವಳು ಎದುರಿಸಿದ ಕಠಿಣ ಐಹಿಕ ಹಾಗೂ ಆಧ್ಯಾತ್ಮಿಕ ಪರೀಕ್ಷೆಗಳ ಕಥೆ" – ಹೀಗೆ ಒಂದೇ, ಎರಡೇ, ಆದರೆ ಅಕ್ಕನನ್ನಾವರಿಸಿದ ಕಥೆಗಳು ಕವನಗಳ ಪಟ್ಟಿಯಲ್ಲಿ ಹೆಚ್ಚಿನ ಪ್ರಚಾರ ಸಿಕ್ಕಿರುವುದು ಅವಳ ಮೈಗಂಟಿದ ಕಥೆಗೇ ?

ಹೆಣ್ಣು ಬಟ್ಟೆ ತೊಟ್ಟರೂ ಗಂಡಿನ ಪ್ರಪಂಚಕ್ಕೆ ಕಾಣುಬುದು ಆ ಬಟ್ಟೆಯಲ್ಲಡಗಿದ ದೇಹವಾಗಿ ಮಾತ್ರ ಎನ್ನುವುದನ್ನು ಅರಿತು, "ಉಟ್ಟ ಸೀರೆಯ ಸೆಳೆದು.... ಕೊಟ್ಟೆನೊ ಎನ್ನ ತನುಮನವ" ಎಂದು ಭವದ ಹಂಗನ್ನೇ ತೊರೆದ ಮಹಾದೇವಿಯಕ್ಕನನ್ನು ನಮ್ಮ ಸಂಸ್ಕೃತಿಯು ನಮಗೆ ಅರ್ಥಮಾಡಿಸಿರುವುದೇ ? ಪರಿವೆ ಇಲ್ಲದ ಆ ದೇಹದ ಮೂಲಕ. ಅಕ್ಕನ ಸಮಕಾಲೀನನಾದ ಬಸವಣ್ಣನನ್ನು ಥಳಥಳಿಸುವ ಕಿರೀಟ ತೊಟ್ಟ, ಕುದುರೆ ಏರಿದ, ನಗೆ ಮೊಗದ ರಾಜಕುಮಾರನ ರೂಪದಲ್ಲಿ ಊಹಿಸಿಕೊಂಡಿದೆ. ಅಕ್ಕನನ್ನು ದಟ್ಟ ಕೇಶರಾಶಿಯ ಮರೆಯಲ್ಲಿ ಅಡಗಿದ ನಗ್ನದೇಹವನ್ನಾಗಿ ರೂಪಿಸಿಕೊಟ್ಟಿದೆ. ಅನಿಸಿಕೆಗೆ ರೂಪ ಕೊಟ್ಟಾಗ ಕಣ್ಣಿಗೆ ಕಾಣುವ ಆ ರೂಪವು ನಿರೂಪಿಸಿದ ಚಿತ್ರದಲ್ಲಿ ಅರ್ಥಗಳನ್ನು ತುಂಬುತ್ತಾ, ಅದಕ್ಕೊಂದು ಗುರುತಿಸುವಿಕೆಯ ಹುಟ್ಟು ಹಾಕುತ್ತದೆ. ಸಾಮೂಹಿಕ ನೆನಪಿನಲ್ಲಿ ಈ ಚಿತ್ರ ಹಾಗೂ ಅದು ಮೈಗೂಡಿಸಿಕೊಂಡ ಅರ್ಥಗಳು ಭದ್ರವಾಗಿ ನಿಂತು ಬಿಡುತ್ತವೆ.

ಅಕ್ಕ ಹೇಗಿದ್ದಳು ? ಎಂತಿದ್ದಳು ? ಎಂಬುದನ್ನು ನಾವ್ಯಾರು ಕಂಡವರಲ್ಲ. ಹೀಗೆ ತೋರಿದ್ದನ್ನು ನೋಡಿದವರು ಹಾಗೆ ತಿಳಿಯಪಡಿಸಿದ್ದನ್ನು ಅರಿತುಕೊಂಡವರು. ಆದರೆ ಸಮಸ್ಯೆ ಬರುವುದು ಒಬ್ಬ ಮಹಿಳೆಯನ್ನು ವೈಭವೀಕರಿಸುವಾಗ ಅವಳ ಸ್ತ್ರೀತ್ವ ಹಾಗೂ ಲೈಂಗಿಕತೆಗಳನ್ನು, ಅವಳ ಬರಹದ ಲಕ್ಷಣಗಳನ್ನು ನಿರೂಪಿಸುವಲ್ಲಿ ಬಳಸಿದಾಗ ಅವಳ ಚಿತ್ರಣವು ಅವಳ ಬರಹಗಳನ್ನು ಸ್ತ್ರೀತ್ವಕ್ಕೆ ಸೀಮಿತಗೊಳಿಸಿ ನೋಡುವಂಥಾ ಒತ್ತಡವನ್ನು ತಂದಾಗ ಅಷ್ಟೇ ಅಲ್ಲ, ಈ ಅರ್ಥವಂತಿಕೆಯನ್ನು ಮಾದರಿಯಾಗಿಟ್ಟುಕೊಂಡು, ನಿರ್ದಿಷ್ಟ ರೀತಿಯಲ್ಲಿ ಸತತವಾಗಿ ಮಹಿಳೆಯರಲ್ಲಿನ ಬರವಣಿಗೆಗೂ ಇದೇ ತಂತ್ರವನ್ನು ಅಳವಡಿಸುತ್ತ ಬಂದಾಗ ; ಇಲ್ಲಿ ಸಮಸ್ಯೆ ಇನ್ನೂ ಜಟಿಲವಾಗುತ್ತದೆ. ಹೀಗೆ ಮಹಿಳಾ ಕವನಗಳನ್ನು, ಕಾವ್ಯಗಳನ್ನು ಕೇವಲ ಸ್ತ್ರೀತ್ವದ ಚೌಕಟ್ಟಿನೊಳಗೇ ಇಟ್ಟು ನೋಡುವುದು ರೂಢಿಗತವಾದಾಗ ಅದರ ಉಳಿದ ಆಯಾಮ ಹಾಗೂ

ಸಾಧ್ಯತೆಗಳು ಗೋಚರವಾಗದೇ ಹೋಗುವ ಸಂಭವವಿದೆ. ಪುರಾಣಾದಿ ಚಾರಿತ್ರಿಕ ಪಾತ್ರಗಳ ಚಿತ್ರಣವಾಗಲೀ, ಸಾಹಿತ್ಯದ ಪರಿಕಲ್ಪನೆಯಾಗಲೀ, ೧೯ನೇ ಶತಮಾನದಕ್ಕಿಂತ ಹಳೆಯದ್ದೇನಲ್ಲ. ರಂ.ಶ್ರೀ. ಮುಗಳಿಯವರು "ಕನ್ನಡ ಸಾಹಿತ್ಯದ ಇತಿಹಾಸದಲ್ಲಿ ಅಕ್ಕನೇ ಮೊದಲ ಕವಯತ್ರಿ" ಎಂದು ದಾಖಲಿಸಿದರು.... ಆಧ್ಯಾತ್ಮ ಮತ್ತು ಗದ್ಯ ಕವಿತ್ವ ಇವೆರಡನ್ನೂ ಸೊಗಸಾಗಿ ಮೇಳ ಹಾಕುವುದರಲ್ಲಿ ಮಹಾದೇವಿಯಕ್ಕನೇ ಮೊದಲಗಿತ್ತಿ. ಅವಳ ಜೀವನ ಚರಿತ್ರೆ ಅದ್ಭುತ, ರಮ್ಯವಾಗಿದೆ. ಆಧ್ಯಾತ್ಮಕ ಸಾಹಸದಿಂದ ಸ್ಫೂರ್ತಿದಾಯಕವಾಗಿದೆ. ಅಕ್ಕನ ವಚನಗಳ ಕವನಗಳಾಗಿ ಪರಿವರ್ತಿಸುವ ಪ್ರಯತ್ನಕ್ಕೆ ಉದಾಹರಣೆಗಳು ಕನ್ನಡ ಸಾಹಿತ್ಯ ಚರಿತ್ರೆಗಳ ಪುಟಗಳಲ್ಲಿ ಸಾಕಷ್ಟು ದೊರಕುತ್ತವೆ. ಸತಿಭಾವದ ಉನ್ನತ ಆತ್ಮ ಸಮರ್ಪಣ ಮತ್ತು ದೈವೀ ವಿರಹದ ಭಾವತೀವ್ರತೆಯಿಂದಾಗಿ ಅಕ್ಕಮಹಾದೇವಿಯ ವಚನಗಳಲ್ಲಿ ಭಾವಗೀತೆಯ ಗುಣ ಹೆಚ್ಚಾಗಿ ಇದೆ.

ಆಧುನಿಕ ಮಹಿಳಾ ಕವನಗಳ ಮೇಲೆ ಮಹಾದೇವಿ ಅಕ್ಕನ ಪ್ರಭಾವವನ್ನು ಕುರಿತು ಈಗಾಗಲೇ ಸಾಕಷ್ಟು ಬರವಣಿಗೆ ಬಂದಿದೆ. ಜಿ.ಎಸ್. ಶಿವರುದ್ರಪ್ಪ ಅವರು ಸ. ಉಷಾ ಅವರ ಸಂಕಲನ "ಈ ನೆಲದ ಹಾಡು"ವಿಗೆ ಬರೆದ ಮುನ್ನುಡಿಯಲ್ಲಿ, ಅಕ್ಕಮಹಾದೇವಿ ಮತ್ತು ಸಂಚಿ ಹೊನ್ನಮ್ಮ ಇಬ್ಬರು ಮಹಿಳೆಯರಿಗೆ ಸಂಬಂಧಿಸಿದ ಎರಡು ಮಾದರಿಗಳನ್ನು ಪ್ರತಿನಿಧಿಸುತ್ತಾರೆ. ಇತ್ತೀಚಿನ ಮಹಿಳೆಯರ ಬರಹಗಳು ಅಕ್ಕನ ಮಾದರಿಯನ್ನು ಮುಂದುವರಿಸುವಂತಿವೆ ಎನ್ನುತ್ತಾರೆ.

ಕವನಗಳಲ್ಲಿ ಅಕ್ಕನನ್ನು ಕುರಿತ ವಸ್ತು ತೀರಾ ಗಮನಾರ್ಹವಾಗಿ ಕಾಣಿಸಿಕೊಳ್ಳುತ್ತ, ಬಹುಶಃ ಈ ಕವಯತ್ರಿಯರ ಧೋರಣೆಯ ಕೇಂದ್ರ ಪ್ರತೀಕವೂ ಆಗಿ ಪರಿಣಮಿಸಿದೆ. ಅದಮ್ಯವಾದ ಪ್ರೀತಿಯನ್ನು ತುಂಬಿಕೊಂಡ ಹೆಣ್ಣಿನ ವ್ಯಕ್ತಿತ್ವಕ್ಕೆ ಘನತೆಯನ್ನು, ಗೌರವವನ್ನು ಅಪೂರ್ವವಾದ ಆತ್ಮ ಪ್ರತ್ಯಯವನ್ನೂ ತಂದುಕೊಟ್ಟ ಅಕ್ಕನ ಬದುಕು ನಮ್ಮ ಆಧುನಿಕ ಕವಯತ್ರಿಯರನೇಕರಿಗೆ ತಕ್ಕ ವಸ್ತು ಪ್ರತಿರೂಪವಾಗಿರುವುದು ಆಶ್ಚರ್ಯವೇನಲ್ಲ.

ಆಧುನಿಕ ಮಹಿಳಾ ಕವನಗಳ ಬೇರನ್ನು ಮಹಾದೇವಿಯಕ್ಕನ ರಚನೆಗಳಲ್ಲಿ ಹುಡುಕುವ ಪ್ರಯತ್ನವು ಒಂದು ರೀತಿಯಲ್ಲಿ ಆಧುನಿಕ ಕವನಗಳ ವಿಶ್ಲೇಷಣೆಯನ್ನು ಸೀಮಿತಗೊಳಿಸುತ್ತದೆ. ಆದರೂ ಆ ವಿಧಾನವು ಪುರುಷ ಕೇಂದ್ರಿತ ವಿಶ್ಲೇಷಣೆಗೆ ಒಪ್ಪವಾಗಿ ಒದಗಿ ಬರುವ ಸರಕು. ಆದ್ದರಿಂದ "ಮಹಿಳಾ ಕವನಗಳು" ಎನ್ನುವ ವರ್ಗದ ಉಗಮದ ಜೊತೆಗೇ ಅದರ ಗುಣಾವಗುಣಗಳ ವಿಶ್ಲೇಷಣೆಗೆಂದು 'ಸ್ತ್ರೀ ಸಹಜ, ಸ್ತ್ರೀತ್ವದ ಗುಣ, ಸ್ತ್ರೀ ಸೌಜನ್ಯ, ಸ್ತ್ರೀ ಸಂವೇದನೆ....... ಮುಂತಾದ ಪದ ಪ್ರಯೋಗಗಳು ಧಾರಾಳವಾಗಿ ಬಳಕೆಗೆ ಬಂದದ್ದನ್ನು ಗಮನಿಸಬಹುದು. ಮಹಿಳಾ ಕವನಗಳ ಕುರಿತು ಬಂದಿರುವ ವಿಮರ್ಶೆಗಳನ್ನು ಗಮನಿಸಿದರೆ, ಸ್ತ್ರೀತ್ವದ ಚೌಕಟ್ಟಿನೊಳಗೇ ಮಹಿಳಾ ಕವನಗಳನ್ನು ಹಿಡಿದಿಡುವ ಪ್ರಯತ್ನಗಳು ಮೇಲಿಂದ ಮೇಲೆ ಆಗಿರುವುದು ಧಾರಾಳವಾಗಿ ಕಂಡುಬರುತ್ತದೆ.

ಆಧುನಿಕ ಮಹಿಳಾ ಕವನಗಳ ನಿರೂಪಣೆಯಿಂದ ಹಿಡಿದು ವಿಶ್ಲೇಷಣೆವರೆಗೆ ಪ್ರತಿಯೊಂದು ಘಟ್ಟದಲ್ಲೂ ಅಕ್ಕನನ್ನು ಮಾನದಂಡವಾಗಿ, ಅಕ್ಕನೆಂಬ ಈ ಅದ್ಭುತ ಭಂಡಾರದಿಂದ

ಸರಕುಗಳನ್ನು ಒಂದೊಂದಾಗಿ ಹೊರಗೆಳೆದು ಬಳಸಿದಂತೆ ಕಂಡರೂ, ಇಲ್ಲಿ ಅಕ್ಕ 'ಒಂದು ನಿಮಿತ್ತ ಮಾತ್ರ' ಅಕ್ಕನನ್ನು ಹೇಗೆ ಕೊಟ್ಟರೋ ಹಾಗೆ ಆಧುನಿಕ ಮಹಿಳಾ ಕವನಗಳು ಆಕೆಯನ್ನು ಸ್ವೀಕರಿಸಿದೆ. ಅಕ್ಕ ಬಟ್ಟೆಯ ಹಂಗನ್ನು ಕಳಚಿಕೊಂಡ ಗಳಿಗೆಯನ್ನು ನಾವು ಪ್ರಾಮಾಣಿಕ ಪ್ರಯತ್ನ ಮಾಡಿಕೊಂಡದ್ದೇ ಮಹಿಳಾ ಕವನಗಳ ಮಹತ್ತರವಾದ ಶಕ್ತಿ ಎನ್ನಬೇಕು. ಶರೀರ ಮತ್ತು ಅಸ್ಮಿತೆಗಳ ಪ್ರಬಲವಾದ ನಂಟನ್ನು ಆಧುನಿಕ ಮಹಿಳಾ ಕವನಗಳು ಘಂಟಾ ಘೋಷವಾಗಿ ಆಚರಣೆ ಮಾಡದೆ ದೇಹದ, ಮನಸಿನ, ಕನಸಿನ ತುಡಿತಗಳನ್ನು ಕುರಿತು ಮುಜುಗರವಿಲ್ಲದೇ ಮಾತನಾಡುವ ದಿಟ್ಟತನವನ್ನು ಅಕ್ಕನೆಂಬ ವಸ್ತು ಮಹಿಳಾ ಕವನಗಳಲ್ಲಿ ಹುಟ್ಟಿಸಿತು.

ಆಧುನಿಕ ಮಹಿಳಾ ಕವನಗಳು ಸಹ ತನ್ನ ಸಂದರ್ಭಕ್ಕನುಗುಣವಾಗಿ ಅಕ್ಕನನ್ನು ಬಳಸಿಕೊಂಡಿತು. ಹೀಗೆ ಬಳಸಿಕೊಂಡಿರುವ ಬಗೆಯನ್ನು ಅರ್ಥಮಾಡಿಕೊಳ್ಳುವುದಕ್ಕಾಗಿ ಈ ಪ್ರಬಂಧದಲ್ಲಿ ಆಧುನಿಕ ಮಹಿಳಾ ಕವನಗಳಿಂದ ಅಕ್ಕನ ಇಣುಕುನೋಟ ಇರುವ ಕೆಲವು ಕವನಗಳನ್ನು ಆಯ್ದುಕೊಳ್ಳಲಾಗಿದೆ.

ಅಕ್ಕನ ವಚನಗಳ ಜಾಡನ್ನೇ ಹಿಡಿದು ಹೊರಟ ಹಾಗೆ ಕಾಣುವ ಸವಿತಾ ರವರ ಕವನ "ಎಲ್ಲಾ ಹುಡುಗಿಯರ ಕನಸು", 'ಅವ್ವ ಕೇಳೇ ನಾನೊಂದು ಕನಸ ಕಂಡೆ'..... ಎಂದು ಆರಂಭವಾಗುತ್ತದೆ. ಸುಂದರವಾದ ಈ ಕವನದ ನಾಯಕನೂ ಚೆನ್ನಮಲ್ಲಿಕಾರ್ಜುನನ ಪ್ರತಿರೂಪ.

"ಹುಲಿಧರ್ಮ ಹೊದ್ದರೂ ಹಾಲು ಮನಸಿನ ಹುಡು
ಡೊಳ್ಳೆ ಭಾರಿಸಿ, ಢಕ್ಕೆಯ ಬಡಿದು, ಡಮರುಗ ನುಡಿಸಿದ
ನವಿಲ ಹಾಗೆ ಕುಣಿದು ಮಿಂಚು ಮಳೆ ಕರೆದ........
ಒಲ್ಲೆ ಎಂದರೂ ಬಿಡದೆ ಒಲವು ಬೇಡಿದನವ್ವ........
ಮುದ್ದಾಗಿ ಮಾತಾಡಿ ಮರುಳು ಮಾಡಿದನವ್ವ"

ಈ ಕವನದಲ್ಲಿ ಅಕ್ಕನ ಉತ್ಕೃಷ್ಟ ಪ್ರಣಯ ವಚನಗಳ ಹಾಗೆ ನಾಯಕನ ಹೊರತಾಗಿ ನಾಯಕಿಗೆ ಏನೂ ಕಾಣುವುದಿಲ್ಲ. ಅವಳ ಉದ್ದೇಶದ ಆದಿ – ಅಂತ್ಯ ಎಲ್ಲವೂ ಅಡಗಿರುವುದು ನಾಯಕನಲ್ಲೆ. ಎಲ್ಲಾ ಹುಡುಗಿಯರ ಕನಸೂ ಅಕ್ಕನ ವಚನ ಮುಂದುವರಿಕೆಯಷ್ಟೆ. ಅದೇ ಕನಸು, ಅಂಥದ್ದೇ ನಾಯಕ ಸಹಜವಾಗಿ ಮತ್ತೆ – ಮತ್ತೆ ಮರುಕಳಿಸಿ ಬರುವುದನ್ನು ಪ್ರತಿನಿಧಿಸುವ ಈ ಕವನ ಅಕ್ಕನ ಪ್ರಪಂಚದ ಪ್ರತಿಮೆಗಳನ್ನೇ ಬಳಸಿಕೊಳ್ಳುತ್ತದೆ. ಸ. ಉಷಾರವರ 'ಅಕ್ಕ ಹೇಳಿದ್ದು' ಕವಿತೆಯು ನೇರವಾಗಿ ಅಕ್ಕನ ಕಥೆಯಿಂದಲೇ ಅಧ್ಯಯನದ ಅನುಕೂಲಕ್ಕೆ ತೆಗೆದುಕೊಳ್ಳುತ್ತದೆ. ಸಮಾನತೆ ಹಾಗೂ ಸಹಿಷ್ಣುತೆಗಳು ವಚನ ಚಳುವಳಿಯ ಬಹುಮುಖ್ಯ ಆಯಾಮಗಳು. ಆದರೆ ಆ ಗುಣ, ಧರ್ಮ ಪಾಲನೆ ಪುರುಷ ಪ್ರಧಾನ, ಮೌಲ್ಯಾಧಾರಿತವಾದದ್ದು.

"ಸೆರಗೆಳೆವ ರಾಜರು

ಕೊಂಕು ನೋಟವ ಹೊದ್ದ

ತುಂಬು ಸೆರಗಿನ ಗರತಿಯರು.........."

ಇಂಥಾ ಸಮಾಜದಲ್ಲಿ ಬೆತ್ತಲಾಗಿ ಹೊರಟ ಮಹಾದೇವಿಗೆ 'ಹರಿಯ ಸೀರೆಯಲರ್ಧ ಕೊಟ್ಟು ಮೈವಲಚ್ಚ ಬಂದ ತಾಯಂದಿರು ಎದುರಾಗುತ್ತಾರೆ. ಆದರೆ ದುಃಖ ತರುವ ಸಂಗತಿಯೆಂದರೆ ಪತಿಯ ಕುರುಹ ಹೇಳದಿರೆ ತೊಲಗೆಂದು ನಿರ್ವಾಣದ ಬೆಳಗು ಕೊರಳೆತ್ತಿದು.

"ಇರಲಿರಲಿ ಶೂನ್ಯಗಳು

ಸಿಂಹಾಸನಗಳು

ಗಿಳಿಕೋಗಿಲೆಗಳನ್ನಾದರೂ

ದಾರಿ ಕೇಳುತ್ತಾ

ನಿಮ್ಮ ನಡೆ ನುಡಿಯ ಬಿಸುಟು

ಹೋಗುತ್ತೇನೆ ಕದಳಿಗೆ"

ಪುರುಷ ಪ್ರಧಾನ ಮೌಲ್ಯಾಧಾರಿತ ಸಮಾಜದಲ್ಲಿ ಮಹಿಳೆಗೆ ಒಬ್ಬ ಸ್ವತಂತ್ರ ವ್ಯಕ್ತಿಯಾಗಿ ಯಾವ ಸ್ಥಾನವೂ ಇರುವುದಿಲ್ಲ. ಅವಳ ಭಕ್ತಿ ಬೌದ್ಧಿಕ ಸಾಧನೆಗಳಿಗಿಂತ ಅವಳ ರೂಪ, ದೇಹ, ಪಿತೃಪ್ರಧಾನ ಚೌಕಟ್ಟಿನಲ್ಲಿ ಮಹಿಳೆಯಾಗಿ ಅವಳು ನಿರ್ವಹಿಸಿದ ಪಾತ್ರ ಹೆಚ್ಚು ಪ್ರಸ್ತುತವಾಗುತ್ತದೆ.

ಪುರುಷರು ಹೆಣ್ಣಿನ ವ್ಯಕ್ತಿತ್ವವನ್ನು ಆವಾಹಿಸಿಕೊಳ್ಳುತ್ತಾರಲ್ಲದೆ, ಅವರು ಹೆಣ್ಣುತನದವರೇ ಆಗುತ್ತಾರೆ. ಆದರೆ, ಪುರುಷ ದೇವರ ಬಗೆಗಿನ ಅವರ ಹಂಬಲ, ಅನಾಸಕ್ತಿಯದಾಗಿದೆ. ದೇವರ ಎದುರಲ್ಲಿ ಎಲ್ಲಾ ಗಂಡಸರೂ, ಹೆಂಗಸರಿದ್ದಂತೆ. ಆದರೆ ಮಹಿಳೆ ಎಷ್ಟೇ ಜೋರಾಗಿ ಪುರುಷ ಕೇಂದ್ರಿತ ಸಂಬಂಧದ ತೊಡಕುಗಳನ್ನು ಉಲ್ಲಂಘಿಸಿದರೂ, ಅವಳು ಪುರುಷ ವ್ಯಕ್ತಿತ್ವವನ್ನು ಅವಾಹಿಸಿಕೊಳ್ಳುವುದಿಲ್ಲ. ಅದಾಗಲೇ ಅವಳು ಹೆಣ್ಣಾಗಿರುವುದರಿಂದ ದೇವರ ಕಡೆ ತಿರುಗಲು, ಅವರು ಯಾವುದೇ ಬದಲಾವಣೆಗೆ ಒಳಗಾಗುವ ಅಗತ್ಯ ಬರುವುದಿಲ್ಲ. ಅಸ್ಪೃಶ್ಯರು ಮತ್ತು ಕೆಳಜಾತಿಯ ಸಂತರಂತೆ ಅವರೂ ಕೂಡಾ ಕಳೆದುಕೊಳ್ಳಬೇಕಾದುದು ಏನೂ ಇರುವುದಿಲ್ಲ.

ಪುರುಷರು ಪುರುಷರಾಗಬೇಕಾದರೆ ಬದಲಾಗಬೇಕಾಗುತ್ತದೆ. ಇದಕ್ಕೆ ವ್ಯತಿರಿಕ್ತವಾಗಿ ಮಹಿಳೆಯರು ತಮ್ಮ ತಾಯಂದಿರ ಜೊತೆ ತಮ್ಮನ್ನು ಗುರುತಿಸಿಕೊಳ್ಳುವುದನ್ನು ಮುಂದುವರೆಸಬಹುದು. ಅವಳು ಗಂಡು ದೇವರ ಪ್ರೇಮಿಯಾಗಿದ್ದರೂ, ಗಂಡ, ಪುರೋಹಿತ, ಹಿರಿಯರಲ್ಲಿರುವ ಪುರುಷತನದ ಜೊತೆ ಹೋರಾಡಬೇಕಾಗಿಬರಬಹುದು. ಆದರೂ ಅವಳು ಹೆಣ್ಣಾಗಿಯೇ ಉಳಿಯುತ್ತಾಳೆ. ಅವಳ ಪ್ರೇಮ ಕಾವ್ಯದಲ್ಲಿನ ಈ ವಿಶಿಷ್ಟತೆ ಅವಳು ತೀವ್ರವಾಗಿ ಸಂಭ್ರಮಿಸುವಂತೆ ಮಾಡುತ್ತದೆ.

ತಾನು ಪ್ರಾರಂಭ ಮಾಡಿದಲ್ಲಿಂದಲೇ ಇದನ್ನು ಮುಗಿಸಲು ಇಷ್ಟಪಡುತ್ತೇನೆ. ಸೀತಾ ಮತ್ತು ಸಾವಿತ್ರಿಯರಂಥವರಲ್ಲಿ ಅಂತರ್ಗತವಾಗಿರುವ ಪೌರಾಣಿಕ ಆದರ್ಶಗಳು ಮಾತ್ರವೇ ಭಾರತೀಯ ನಾರಿಯರಿಗೆ ಲಭ್ಯವಿರುವ ಮಾದರಿಗಳಲ್ಲಿ, ಮೊದಲಿನ ಮದುವೆಯ ನಿರಾಕರಣೆ ಮತ್ತು ಇತರ ಕೌಟುಂಬಿಕ ಒತ್ತಡಗಳನ್ನು ನಿಭಾಯಿಸುವುದು. ಅವರಿಗೆ ಸಾಧ್ಯವಾಗುವುದಾದರೆ, ಭಕ್ತಿ ಮಾರ್ಗದಲ್ಲಿ ಅವರಿಗೆ ಭಿನ್ನವಾದ ಮಾರ್ಗವೊಂದು ತೆರೆಯುತ್ತದೆ. ಈ ಸಮಾನಾಂತರದ ಸಂದರ್ಭಗಳ ಗಮನಿಸಿದಾಗ, ಸಾಂಪ್ರದಾಯಿಕ ಸಮಾಜಗಳಲ್ಲಿ ಸ್ತ್ರೀ ಪುರುಷರಿಬ್ಬರಿಗೂ ಸ್ಥೂಲವಾಗಿ ಬೇರೆ – ಬೇರೆಯಾದ ಜಗತ್ತುಗಳನ್ನು ರೂಪಿಸಿರುವುದು ಕಂಡುಬರುತ್ತದೆ.

ಭಾರತದ ಸಾಮಾಜಿಕತೆ ನಿರ್ಮಿಸಿಕೊಂಡಿರುವ ದಾಂಪತ್ಯವು ಸ್ತ್ರೀ ಸೆರೆಯಲ್ಲಿ ವಿಜೃಂಭಿಸಲ್ಪಟ್ಟಿದೆ. ತನ್ನ ಹಕ್ಕು ಹಾಗೂ ಪ್ರಾಕೃತಿಕ ಅಭಿವ್ಯಕ್ತಿಗಳಿಗೂ ಪುರುಷ ಅಪ್ಪಣೆಯ ಕಟ್ಟಳೆಗೆ ಮಹಿಳೆ ಒಳಗಾಗಿದ್ದಾಳೆ. ಇಂಥ ಕಟ್ಟಳೆಯಿಂದ ಪಾರಾಗಲು ಸಾಧ್ಯವಾಗದೆ ಅಸಂಖ್ಯಾತ ಹೆಣ್ಣುಗಳ ಅಸ್ತಿತ್ವ ನಾಶವಾಗಿದೆ. ಪುರುಷ ಪ್ರಣೀತ ಜೀವನಕ್ರಮಗಳು ಮುಂಚೂಣಿಗೆ ಬಂದ ಸಾಮಾಜಿಕ ರಾಜಕಾರಣದೊಳಗೆ ದಿಗಂಬರತೆಯ ಮೂಲಕ ಉಗ್ರ ಪ್ರತಿಭಟನೆಗೆ ಕಾರಣವಾದ ದಿಟ್ಟ ಮಹಿಳೆ ಅಕ್ಕ. ಭಾರತೀಯ ಸಾಂಪ್ರದಾಯಿಕ ವಿವಾಹ ಪದ್ಧತಿಯನ್ನು ಅಕ್ಕ ಭಗ್ನಗೊಳಿಸಿದ್ದಾಳೆ. ಕೊರತೆಗಳು ನೀಗಿ, ಚಲನಶೀಲತೆಯೊಂದು ಇಲ್ಲಿ ನಿರ್ಮಾಣಗೊಂಡಿದೆ. ಸಮಕಾಲೀನ ಸಮಾಜದ ಮಧ್ಯಮ ವರ್ಗದ ಮಹಿಳೆಯಾಗಿ ಬಾಳುವೆ ನಡೆಸುವುದರ ಬಿಕ್ಕಟ್ಟು ಹಾಗೂ ದ್ವಂದ್ವಗಳನ್ನು ವೈದೇಹಿರವರ 'ತಂಗಿಯ ಪದಗಳಾ' ಎಂಬ ಶೀರ್ಷಿಕೆಯ ಕವಿತೆಗಳಲ್ಲಿ ಕಾಣಬಹುದು. ಅಕ್ಕನನ್ನು ಆದರ್ಶವಾಗಿ ಪರಿಗಣಿಸಿದರೂ ಸಹ ಸಂಸಾರಿಗಳು ಸಮಸ್ಯೆಗಳೇ ಬೇರೆ ಎಂಬುದು ನಿಜದ ಸಂಗತಿ.

"ದೈನಂದಿನೆತ್ತಿಗೆ ಹುರುಳಿ ಬೇಯಿಸಬೇಕು
ಒಲೆಮುಂದೆ ಇರಬೇಕು ನಂದದಂತೆ......
....... ಕೇಳಿದರೂ ವನದ ಕತೆ ತಾಳಿಕೊಳ್ಳಲೇಬೇಕು
ನೆರವಾಗುತ್ತದೆ ಲೋಕಯುಕ್ತಿ
ಕದಳಿ ಸಸಿಗಳ ನಾಕು ಸಾಕಿಕೊಂಡಿದ್ದೇನೆ
.......... ಮನೆಯ ಹಿಂದಿನ ಹಿತ್ತಲಲ್ಲಿ.
ನಿನ್ನ ನೆನಪಿಗೆ ನನ್ನ ಯಥಾನುಶಕ್ತಿ"

ಎಲ್ಲವನ್ನೂ ತೊರೆದು, ಮನಸು ತೋರಿದ ಹಾದಿಯಲ್ಲಿ ಸಾಗಬಲ್ಲ ಸಾಧ್ಯತೆಗಳ ಜೊತೆಗೆ, ಏನನ್ನೂ ತೊರೆದು ಹೋಗಲಾರದ ಅನಿವಾರ್ಯತೆಗಳನ್ನು ಮೇಳೈಸಿ ನೋಡಿದಾಗ ಆಧುನಿಕ ಮಹಿಳೆಯರ ಬದುಕಿನ ಜಟಿಲತೆ ಸ್ಪಷ್ಟವಾಗಿ ಮೂಡಿಬರುತ್ತದೆ. ಅದೇ ರೀತಿ ಸ್ತ್ರೀಪಾತ್ರಗಳು ಪ್ರಧಾನವಾಗಿರುವುದಲ್ಲದೆ, ಸ್ತ್ರೀಶಿಕ್ಷಣವು ಅತ್ಯಂತ ಚರ್ಚಾಸ್ಪದ ವಿಷಯವಾಗಿ ಚರ್ಚಿತವಾಗಿದೆ.

ಬಾಲ ವಿಧವೆಯೊಬ್ಬಳ ವೈಧವ್ಯದ ಬವಣೆಗಳನ್ನು ಆಕೆಯ ಮರುವಿವಾಹವನ್ನು ಚಿತ್ರಿಸುವ ಗುಲಿವಾಡಿ ವೆಂಕಟರಾಯರ 'ಇಂದಿರಾಬಾಯಿಯಲ್ಲ' ಹಾಗೆಯೇ ಇದಕ್ಕೆ ವಿರುದ್ಧವಾಗಿ ಕೆರೂರು ವಾಸುದೇವಾಯಚಾರ್ಯರ "ಇಂದಿರ" ಕೃತಿ. ಆಧುನಿಕ ಮಹಿಳಾ ಸಾಹಿತ್ಯ ಪರಂಪರೆಯ ಸಮೃದ್ಧಿಗೆ ಕಾರಣರಾದ 'ಗೌರಮ್ಮ', 'ಶ್ಯಾಮಲಾ ದೇವಿ', 'ಕಲ್ಯಾಣಮ್ಮ', 'ತಿರುಮಲಾಂಬ', 'ಜಾನಕಮ್ಮ'ನವರ ಅಧ್ಯಯನಗಳಲ್ಲಿ ವಿಫುಲವಾಗಿ ಸ್ತ್ರೀಮುಖಿ ಚಿಂತನೆಯನ್ನು ಕಾಣಬಹುದು.

ಮಹಿಳೆಯರ ಬಗ್ಗೆ ಮತ್ತು ಮಹಿಳಾ ಕಾವ್ಯ ಮತ್ತು ಕವನಗಳ ಬಗ್ಗೆ ತಮ್ಮ ಟೀಕೆಗಳನ್ನು ಮಂಡಿಸುವುದರ ಸಲುವಾಗಿ ಪುರುಷರು ಅಕ್ಕನ ಪ್ರತೀಕವನ್ನು ವಿಮರ್ಶೆ ಮಾಡುತ್ತಲೇ ಬಂದಿದ್ದಾರೆ. ಆಧುನಿಕ ಮಹಿಳಾ ಕಾವ್ಯದ ಧ್ವನಿಯಂತಿರುವ ಸರ್ವಮಂಗಳಾ ಅವರ 'ಭಂಡರು' ಕವಿತೆಯು ಇಂಥ ಟೀಕೆಗಳನ್ನು ಖಂಡಿಸಲು ಬಹಳ ಯಶಸ್ವಿಯಾಗಿದೆ. ಇದಕ್ಕೆ ಉದಾಹರಣೆಯಾಗಿ ಅಕ್ಕನ ಕೆಲವು ಸಾಲುಗಳನ್ನು ಬಳಸಿಕೊಂಡಿದ್ದೇನೆ.

"ಹೆಣ್ಣ ಬುದ್ಧಿ ಮೊಳಕಾಲ ಕೆಳಗಲ್ಲ
ಅಕ್ಕಳಂತೆ ಮುಂಬರಬೇಕು
ಎನ್ನುವ ಲಿಂಗಭಕ್ತ ಅಣ್ಣಗಳ ಭಯವಯ್ಯ
ಮಾತಾಡುತ್ತಲೇ ಉಬ್ಬು ತಗ್ಗಿನತ್ತ
ಕಣ್ಣು ಹಾಯಿಸಿ ಕೈಯಾಡಿಸಿದರೆ
ಹೇಗೆಂದು ಮೆಲುಕಿಸಿ
ಒಳಗೊಳಗೆ ಮುಲುಗುಟ್ಟುವ
ಈ ಪ್ರಭುಗಳ ದಿಗಿಲಯ್ಯ."

ಮಹಿಳೆಯರನ್ನು ಕಡೆಗಣಿಸಿರುವುದನ್ನು ಖಂಡಿಸಿ ಸರ್ವಮಂಗಳಾರವರು ಪುರುಷರನ್ನು, ಪುರುಷರ ಗುಣಾವಗುಣಗಳನ್ನು ಆಕೆ ಎತ್ತಿ ತೋರಿಸಿದ್ದಾರೆ. ಪಿತೃಪ್ರಧಾನ ವ್ಯವಸ್ಥೆಯಲ್ಲಿ 2ನೇ ಲಿಂಗವಾಗಿರುವ ಈಕೆಯನ್ನು ಯಾವ ರೀತಿ ನಡೆಸಿಕೊಳ್ಳುತ್ತಾರೆ. ಅಲ್ಲದೆ ಯಾವ ರೀತಿಯ ಕಷ್ಟಗಳನ್ನು ಅನುಭವಿಸಬೇಕಾಗುತ್ತದೆ ಎನ್ನುವರು. ಸ್ತ್ರೀಯರ ಅಸಹಾಯಕ, ವಿಚ್ಛಿದ್ರ ಪರಿಸ್ಥಿತಿಯೆ ? ಸಾಮಾಜಿಕ ಉತ್ಪಾದಕತೆಗಳಲ್ಲಿ ಉದಾರರಾಗದೇ ಉಳಿದದ್ದರ ಫಲವಾಗಿ ಸೇರಿಸಿಟ್ಟ ಮೌಲ್ಯಗಳ ಪರಿಣಾಮವೇ ? ಇದಾವುದೇ ಇರಲಿ, ನಿಜವಾಗಿಯೂ ಸತ್ವಯುತ ಸಾಧನೆ ಮಾಡಿದ ಸ್ತ್ರೀಯರು ಪುರುಷನಿರ್ಮಿತ ಇತಿಹಾಸದಡಿಯಲ್ಲಿ ಮರೆಯಾಗಿ ಪರಂಪರಾಗತ ಮೌಲ್ಯಗಳಡಿ ಬದುಕುದೂಡುವ ಅವರು ಕಾಲದಿಂದ ಕಾಲಕ್ಕೆ ಶೋಷಿತಗೊಳ್ಳುತ್ತಲೇ ಬಂದಿರುವುದನ್ನು ಗಮನಿಸಬಹುದು.

ಒಟ್ಟಿನಲ್ಲಿ ಅಜ್ಞಾನ, ಅರೆಜ್ಞಾನ ಮತ್ತು ಸುಜ್ಞಾನ, ಅಪ್ರಜ್ಞೆ, ಅರೆಪ್ರಜ್ಞೆ ಮತ್ತು ಪೂರ್ಣಪ್ರಜ್ಞೆ, ಮೊದಲನೆಯವರು ಹೋರಾಡುವುದಿಲ್ಲ. ಎರಡನೆಯವರು ಒಡ್ಡಾಡುತ್ತಾರೆ. ಮೂರನೆಯವರು ತ್ರಯಸ್ಥರಾಗುತ್ತಾರೆ. ಒಟ್ಟು ಸಾಮಾಜಿಕ ಬೆಳವಣಿಗೆಯನ್ನು ಗಮನಿಸಿದರೆ ಒಂದು ವರ್ಗವು ಲಿಂಗ ಅಸಮಾನತೆಗಾಗಿ ಹೋರಾಡುತ್ತಿದ್ದ. ಮೀಸಲಾತಿ, ಪ್ರತ್ಯೇಕತೆ, ದುಡಿಮೆ, ಮಹಿಳೆ – ಈ ಎಲ್ಲಾ ಸಂಗತಿಗಳು ಲಿಂಗ ಅಸಮಾನತೆಯ ಉತ್ಪನ್ನಗಳು. ಇದು ನಡೆದು ವರುಷ ಕಾಲವಾದರೂ ಸಾವಿನ್ನೂ ಸಮಾನತೆಯನ್ನು ಸಾಧಿಸಿಲ್ಲ. ಕಾರಣ ನಿಷ್ಠೆ, ಲಿಂಗ ಅಸಮಾನತೆಯ ಮೂಲಕಾರಣವಲ್ಲ ; ಅದು ಲಿಂಗದ ಭಯ. ಎಲ್ಲಿಯವರೆಗೆ ಲಿಂಗಭೀತಿ ನಿರ್ಮೂಲವಾಗುವುದಿಲ್ಲವೋ ಅಲ್ಲಿಯವರೆಗೆ ಲಿಂಗ ಅಸಮಾನತೆ ಪರಿಹಾರವಾಗಲಿಕ್ಕಿಲ್ಲ.

ಲಿಂಗಭಯ ದಾಟಿದವನಿಗೆ ಹಗಲು ರಾತ್ರಿ ಬೇಧವಿಲ್ಲ. ಗಂಡು – ಹೆಣ್ಣು ವ್ಯತ್ಯಾಸ ತಿಳಿಯುವುದಿಲ್ಲ. ಏಕಾಂಗಿ, ಸಾರ್ವಜನಿಕ ಎಂಬ ಎರಡು ಮುಖಗಳಲ್ಲಿ. ಸ್ತ್ರೀಯ ಸ್ತ್ರೀತನವೇ ಮುಳುವಾಗುವ ಭಯವಿಲ್ಲ. ಈ ನಿಟ್ಟಿನ ನಡೆ ಬೆಳವಣಿಗೆಯ ಸೋಪಾನ.

ಮಹಿಳಾವಾದಿಗಳು ಹೋರಾಟಕ್ಕೆ ತೊಡಗಿದರು. ಅದು ಕರ್ತವ್ಯದಲ್ಲಿ ಅವಳ ಆಯ್ಕೆ ಎಂದರು. ಎಲ್ಲವೂ ಚೆಂದವೇ, ಮಹಿಳೆ ಕುಟುಂಬದ ಬಂಧನವಿಲ್ಲದೆ, ಮದುವೆಯ ಚೌಕಟ್ಟಿನೊಳಗಲ್ಲದೆ ತಾಯಿಯಾಗುವುದನ್ನು ಕುರಿತು ಯೋಚಿಸಿದರು.

ಪ್ರೀತಿಯ ದಾರಿ ಸ್ತ್ರೀಗೆ ತುಂಬಾ ಸರಳ. ಅವಳ ಆ ಗುಣಗಳು ಅವಳನ್ನು ಬೆಳೆಸುತ್ತವೆಂದೇ ಅಂಥ ಗುಣಗಳನ್ನು ಗಂಡನಿಗೆ ಸಮರ್ಪಿಸಿಕೊಳ್ಳುವಂತೆ ಕುಟುಂಬವನ್ನು ಪ್ರೀತಿಸುವಂತೆ ಒತ್ತೆಯಿಡಲಾಯಿತು. ಆದರೆ ಪ್ರೀತಿ ಮತ್ತು ಸಮರ್ಪಣೆ ಎರಡೂ ಅಷ್ಟು ಸಣ್ಣ ವಸ್ತುಗಳಲ್ಲ ! ಮಹಾದೇವಿ ಅಕ್ಕನ ವಚನಗಳು, ನಿರ್ದಿಷ್ಟ ಚೌಕಟ್ಟಿನೊಳಗೆ ಕನ್ನಡಿ ಮಹಿಳಾ ಕಾವ್ಯಕ್ಕೆ ರೂಪ ಕೊಡುವಲ್ಲಿ ಮಹತ್ತರವಾಗಿ ಬೆಳಕಿಗೆ ಬಂದಿದೆ. ಮಹಿಳಾ ಕವಿಗಳು ಸಹ ಅಕ್ಕನ ವ್ಯಕ್ತಿತ್ವ, ಬದುಕು, ಬರಹಗಳನ್ನು, ತಮ್ಮ ಅನುಕೂಲಕ್ಕೆ ತಕ್ಕಂತೆ ತಮ್ಮ ಅನಿಸಿಕೆಗಳನ್ನು ತೆರದಿಡಲು ಬಳಸಿಕೊಂಡಿದ್ದಾರೆ. ಒಟ್ಟಾರೆ ಮಹಾದೇವಿಯಕ್ಕ ಹಾಗೂ ಅವರ ರಚನೆಗಳಿಗೆ ಆಧುನಿಕ ಮಹಿಳಾ ಕಾವ್ಯದಲ್ಲಿ ವಿಶೇಷ ಸ್ಥಾನವಿರುವುದನ್ನು ಯಾರೂ ಅಲ್ಲಗಳೆಯಲಾಗುವುದಿಲ್ಲ.

* * *

ವೀರಶೈವ ಭಕ್ತಿ ಆಂದೋಲನದ ಅವಧಿಯಲ್ಲಿ ಪ್ರಕಟಗೊಂಡ ಶಿವಶರಣೆಯರಲ್ಲಿ ವಿರಕ್ತಿಯ ಹಾದಿ ಹಿಡಿದವರು ಹಲವರು. ಬಿ.ಎನ್. ಸುಮಿತ್ರಾಬಾಯಿರವರು ಕಾಣುವಂತೆ ಎಲ್ಲಾ ಅನುಭವಿಗಳ ಭಾಷೆ ಒಂದೇ, ನೆಲೆ ಒಂದೇ ಎನ್ನುವುದು. ಆದರೆ ಇಂಥ ದಾರಿಯೊಂದನ್ನು ಆಯ್ದುಕೊಂಡು ಅದರಲ್ಲಿ ಸಾಗುವುದಕ್ಕಾಗಿ ರಾಜಸತ್ತೆ, ಕುಟುಂಬ ವ್ಯವಸ್ಥೆಗಳನ್ನು ಎದುರಿಸುವ ದಿಟ್ಟತನ ತೋರಿದ್ದು ಅಕ್ಕಮಹಾದೇವಿಯ ವಿಶಿಷ್ಟತೆ. ಅದಕ್ಕೂ ಮಿಗಿಲಾಗಿ ಹೆಣ್ಣಾಗಿ. ತನ್ನ ಬದುಕಿನ ದಿಕ್ಕು, ಗುರಿಗಳನ್ನು ಆಯ್ದುಕೊಳ್ಳುವಲ್ಲಿ ವ್ಯಕ್ತಪಡಿಸಿದ ಸ್ವತಂತ್ರ ಮನೋಧರ್ಮ ತನ್ನ ಆಯ್ಕೆಯಿಂದಾಗಿ ಇಡೀ ಜಗತ್ತಿನ ಎದುರು ಏಕಾಏಕಿಯಾಗಿ ತನ್ನನ್ನು ಒಡ್ಡಿಕೊಂಡರೂ ಧೃತಿಗೆಡದ ಮನೋಧರ್ಮ, ಈ ವೈಯಕ್ತಿಕ ಹೋರಾಟ ಮತ್ತು ಆಧ್ಯಾತ್ಮಿಕ ಅನುಭವಗಳಿಗೆ ನುಡಿಯಲ್ಲಿ ಅಭಿವ್ಯಕ್ತಿ ನೀಡುವಲ್ಲಿ ಕೂಡ ತೋರಿಸಿರುವ ಅನನ್ಯ ತೀವ್ರತೆ, ಸ್ವಂತಿಕೆ ವೀರಶೈವ ಶರಣರಲ್ಲೇ ಅತ್ಯಂತ ವಿಶಿಷ್ಟವಾದ ನೆಲೆಯನ್ನು ಹುಡುಕಿಕೊಂಡ ಸಾಧಕಿ ಅಕ್ಕಮಹಾದೇವಿ. ಕೆಲವೊಂದು ಚೇತನಶಕ್ತಿಗಳನ್ನು ಹುಡುಕಿಕೊಂಡು ಹೋಗುವವರಲ್ಲಿ ಸಾಧಕರು ಅನುಭಾವಿಗಳು ಎಂದು ಗುರುತಿಸಬಹುದು. ಈ ಅನುಭಾವಿಗಳು ತನ್ನೆಲ್ಲಾ ಆತ್ಮಶಕ್ತಿಯನ್ನು ಅತೀತದಲ್ಲಿ ಕೇಂದ್ರೀಕರಿಸಿ, ಆ ಅತೀತವನ್ನು ಸಾಕಾರಗೊಳಿಸಿಕೊಂಡು ಪ್ರೇಮಭಾವದಿಂದ ತನ್ನನ್ನು ಸಂಪೂರ್ಣವಾಗಿ ಅದಕ್ಕೆ ಅರ್ಪಿಸಿಕೊಳ್ಳುತ್ತಾರೆ. ಇದನ್ನು ವಿಶ್ವದ ಅನೇಕ ಅನುಭಾವಿಗಳಲ್ಲಿ ಕಾಣುತ್ತೇವೆ. ಈ ಮಧುರ ಭಕ್ತಿಯ ಪ್ರಕಾರಗಳಲ್ಲಿ ಅಕ್ಕಮಹಾದೇವಿ ಒಬ್ಬಳು ಎಂದು ಡಾ॥ ಸುಮಿತ್ರಾಬಾಯಿ ನೋಡಿದ್ದಾರೆ. ಇದೇ ರೀತಿ ನಮ್ಮಲ್ಲಿ ಭಕ್ತಿಯ ಸಾಧಕರು ಇರುವಂತೆ ಪಾಶ್ಚಾತ್ಯರಲ್ಲೂ ನಾವು ಕಾಣಬಹುದು. ಅವರ ಆತ್ಮೀಯ ಭಕ್ತಿಯ ಸಾಧಕರಲ್ಲಿ ಸೂಜೊ, ಜೂಲಿಯಸ್, ಸೆಂಟ್‌ಗಟ್ರೂಡ, ಸೆಂಟ್ ಟೆರೆಸಾ, ಮೊದಲಾದವರನ್ನು ಗಮನಿಸಬಹುದು. ಜೀವ ದೇವರ ಸಂಬಂಧಕ್ಕೆ ಸತಿ – ಪತಿ ಭಾವವನ್ನಾರೋಪಿಸಿ, ಮನುಷ್ಯ ಸಂಬಂಧದ ಉತ್ಕಟತೆ, ತನ್ಮಯತೆಗಳನ್ನು ಈ ಎಲ್ಲಾ ಸಾಧಕರಲ್ಲಿ ಕಾಣಬಹುದಾಗಿದೆ.

ಅನುಭಾವ ಮತ್ತು ಅನುಭವ ಮೂಲತಃ ಅನುಭಾವ ಸಾಹಿತ್ಯವಾದ ವಚನ ಸಾಹಿತ್ಯ ಕನ್ನಡ ಭಾಷೆಗೆ ಹೊಸ ಆಯಾಮಕೊಟ್ಟು, ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿದೆ. ವಚನಗಳನ್ನು ಕನ್ನಡ ಜಗತ್ತಿನ ಹೊರಗೆ ಪರಿಚಯಿಸುವ ಅನೇಕ ಪ್ರಯತ್ನಗಳು ನಮ್ಮ ಕವಯತ್ರಿಯರು ನಡೆಸಿದ್ದಾರೆ. ನಮ್ಮ ಕವಯತ್ರಿಯರು ಭಿನ್ನದೃಷ್ಟಿಕೋನಗಳಿಂದ ಹೊಸ ಓದುವ ದಾರಿಗಳನ್ನು ಹುಡುಕಲು ಅನುವುಮಾಡಿಕೊಟ್ಟಿದ್ದಾರೆ.

ಈ ಮೇಲಿನ ಎಲ್ಲಾ ಗುಣಗಳಾಗಿ ಕನ್ನಡದ ಮೊದಲ ಕವಯಿತ್ರಿ ಅಕ್ಕಮಹಾದೇವಿ ನಮಗೆ ಮಾನ್ಯಳಾಗಿದ್ದಾಳೆ. ಆಕೆಯ ವಚನ ಸಾಹಿತ್ಯ ಇಂಥ ಅಭೂತಪೂರ್ವ ಚಾರಿತ್ರಿಕ ಸ್ಥಿತಿಯನ್ನು ಮಹಿಳೆಯೊಬ್ಬಳ ನೆಲೆಯಿಂದ ನೋಡುವ ಅಪರೂಪದ ದಾಖಲೆಯಾಗಿದೆ. ಇಂಥ ದಾಖಲೆಯನ್ನು ಹತ್ತಿರದಲ್ಲಿ ನೋಡುವಾಗ ಘನವಾದ ವ್ಯಕ್ತಿತ್ವದ ಆಂತರಿಕ ನೆಲೆಗಳನ್ನು ಅರಿಯಲು ಸಾಧ್ಯವಾಗುತ್ತದೆ. ಅಕ್ಕಮಹಾದೇವಿಯ ರಚನೆಗಳಾಗಿ ವಿದ್ವಾಂಸರ ಶೋಧನೆಗಳಿಂದ

ಲಭ್ಯವಿರುವುದು ೩೪೩ ವಚನಗಳು. ಯೋಗಾಂಗ ತ್ರಿವಿಧಿ ಎಂಬ ಕಿರುಕಾವ್ಯ, ಸೃಷ್ಟಿಯ ವಚನ ಮತ್ತು ಹಲವಾರು ತತ್ವ ಪದಗಳು. ಈ ವಿವಿಧ ರಚನಾ ಪ್ರಕಾರಗಳಲ್ಲಿ ಅಕ್ಕನ ವ್ಯಕ್ತಿತ್ವ ಮತ್ತು ಅನುಭವಗಳು ದಟ್ಟವಾಗಿ ಕಾಣಸಿಗುವುದು ವಚನಗಳಲ್ಲಿಯೇ ಆದ್ದರಿಂದ ವಚನಗಳು ಅಕ್ಕನ ಚಿಂತನೆ, ಭಾವನೆ, ಅನುಭವಗಳನ್ನು ಅರಿಯಲು ಸಹಜ ಆಕರಗಳಾಗಿವೆ.

ಧಾರವಾಡದ ಇಂಗ್ಲೀಷ್ ಪ್ರಾಧ್ಯಾಪಕ ಮತ್ತು ಮೆನೆಝಿಸ್ ಅವರು ಹೊರತಂದಿರುವ ಕೃತಿಗಳೂ, ತೇಜಸ್ವಿನಿ ನಿರಂಜನ ರ ಪ್ರಕಾರ ಈ ಇಬ್ಬರೂ ಅನುವಾದಕರೂ ವಚನ ಸಾಹಿತ್ಯವನ್ನು ಕ್ರಿಶ್ಚಿಯಾನಿಟಿ ಮತ್ತು ನವ್ಯೋತ್ತರ ನವ್ಯ ವಿಮರ್ಶೆಯ ದೃಷ್ಟಿಕೋನಗಳಿಗೆ ಅಳವಡಿಸುವ ಪ್ರಯತ್ನ ಮಾಡುತ್ತಾರೆ. ಈ ಅನುವಾದಗಳು ೧೯ನೇ ಶತಮಾನದ ಕೆಲವು ದೇಸಿ ಪ್ರತಿಕ್ರಿಯೆಗಳ ಪುನರಾವರ್ತನೆಗಳಾಗಿವೆ.

ಕೆ. ಲಲಿತಾರವರು ತಮ್ಮ Women writing in India ಪುಸ್ತಕದಲ್ಲಿ ಮಧ್ಯಯುಗದ ಭಾರತೀಯ ಸ್ತ್ರೀ ಸಾಹಿತ್ಯವನ್ನು ಚರ್ಚಿಸುತ್ತಾರೆ. ಮಧ್ಯಯುಗದ ಭಕ್ತಿ ಚಳುವಳಿಯ ಭಾಗವಾಗಿ ಅನೇಕ ಸ್ತ್ರೀ ಅನುಭಾವಿಗಳು ಬರಹಗಳು ನಮಗೆ ದೊರಕಿದ್ದರೂ ಕೂಡ ಇದರಿಂದ ಅಂದಿನ ಪುರುಷ ಪ್ರಧಾನ ವ್ಯವಸ್ಥೆಯಲ್ಲಾಗಲಿ ಅಥವಾ ಒಬ್ಬ ಸಾಮಾನ್ಯ ಸ್ತ್ರೀಯ ಸಾಮಾಜಿಕ ಬದುಕಿನಲ್ಲಾಗಲಿ ಯಾವುದೇ ಬದಲಾವಣೆಯಾದದ್ದು ಕಂಡು ಬರುವುದಿಲ್ಲ. ಎನ್ನುವ ವಿಚಾರವನ್ನು ಇವರು ವ್ಯಕ್ತಪಡಿಸುತ್ತಾರೆ. ಅಕ್ಕನ ವಚನಗಳು ಸಂಕೀರ್ಣವಾಗಿದ್ದು, ಬೆರಗುಗೊಳಿಸುವಂಥವು ಎನ್ನುತ್ತಲೇ ಆಕೆಯ ವಚನಗಳು ತನ್ನ, ಮಲ್ಲಿಕಾರ್ಜುನನೊಂದಿಗಿನ ಆಕೆಯ ಸಂಬಂಧ ಅನೈತಿಕವೆನ್ನುವ ಭಾವನೆಗಳು ನೀಡುವ ರೂಪಕಗಳನ್ನು ಬಳಸುತ್ತವೆಯೆಂದೂ, ನಿಷೇಧಪ್ರೇಮ, ಈಡೇರಿದ ಪ್ರೇಮ ಮತ್ತು ವಿರಹಗಳು ಪ್ರಧಾನ ಆಶಯಗಳಾಗಿ, ಲೈಂಗಿಕ ಪ್ರೇಮ ಆಧ್ಯಾತ್ಮ ಸಾಧನೆಯ ಸಂಕೇತವಾಗಿ ನಿಲ್ಲುವುದೆಂಬ ಮಾತುಗಳನ್ನು ಹೇಳುತ್ತಾರೆ. ಈ ಮಾತುಗಳು ಬಹುಮಟ್ಟಿಗೆ ನಿಜವಾದರೂ ಎಲ್ಲೋ ಏಕಮುಖಿ ತಿಳುವಳಿಕೆಯ ಫಲವಾಗಿವೆ. ಬಹುಶಃ ಈ ಭಾವನೆ ಹುಟ್ಟಲು ಕಾರಣ ವಿಮರ್ಶಕರ ಲಬ್ಧವಿರುವ ಆಕರಗಳ ಮೇಲಿನ ಅವಲಂಬನೆ, ಇದರಿಂದಾಗಿ ಅವರಿಗೆ ಅಕ್ಕನ ವಚನಗಳ ಉಳಿದ ಅರ್ಥಪಾತಳಿಗಳು ಲಭ್ಯವಾಗದೆ ಹೋಗುತ್ತವೆ.

ಅಕ್ಕನ ವಚನಗಳ ಸಂಕೀರ್ಣತೆ, ಅಂತರ್ಮುಖತೆ ಮತ್ತು ಭಾವತೀವ್ರತೆಗಳು ಅನೇಕ ರೀತಯ ಓದಿಗೆ ತೆಗೆದುಕೊಳ್ಳುತ್ತವೆ. ಸ್ತ್ರೀವಾದಿಗಳಿಗೆ ಕುಟುಂಬ, ಗಂಡ, ಮನೆ ಎನ್ನುವ ಪುರುಷ ಪ್ರಧಾನ ನೆಲೆಗಳನ್ನು ನಿರಾಕರಿಸಿ ತನ್ನ ಸ್ವಂತಿಕೆಯನ್ನು ಸಾಧಿಸುವ ಅಕ್ಕ ಮುಖ್ಯಳಾಗಿದ್ದಾಳೆ.

ಎಂ.ಎಸ್. ಆಶಾದೇವಿ ಹೇಳುವಂತೆ 'ಉಜ್ವಲವಾದ ಒಂದು ವ್ಯಕ್ತಿತ್ವವನ್ನು ಗ್ರಹಿಸುವುದೆಂದರೆ ದೇಶ ಕಾಲಾತೀತವಾಗಿ ಮನುಷ್ಯ ಸ್ವಭಾವದ ದೌರ್ಬಲ್ಯಗಳನ್ನು, ವ್ಯವಸ್ಥೆಯ ಮಿತಿಗಳನ್ನು ಮೀರಲು ನಡೆಸಿದ ಮಹಾಗಾದೆಯೊಂದನ್ನು ಓದಿದಂತೆ, ಮನುಷ್ಯರ ಅಸೀಮ ಶಕ್ತಿ – ಸಾಧ್ಯತೆಗಳನ್ನು ಮನದಟ್ಟುಮಾಡಿಕೊಳ್ಳುವ ಸಲುವಾಗಿಯೇ ಸಾಧಕರ ಜೀವನವನ್ನು ಕುರಿತಂತೆ

ಕೊನೆಯಿಲ್ಲದ ಆಸಕ್ತಿ ಸಮಾಜದಲ್ಲಿ ಉದ್ದಕ್ಕೂ ಉಳಿದುಕೊಂಡು ಬಂದಿದೆ. ಆದರೆ ನಾಗರಿಕ ಸಮಾಜವೊಂದು ರೂಪಿಸಿಕೊಂಡಿರುವ ಏನೆಲ್ಲಾ ಮಾನದಂಡ ಮತ್ತು ಮಿತಿಗಳನ್ನು ಮೀರಿ ಬೆಳೆದ ವ್ಯಕ್ತಿತ್ವವೊಂದನ್ನು ನಾವು ಆ ವ್ಯಕ್ತಿತ್ವದ ನಿಜ ವಿಸ್ತಾರದ ನೆಲೆಯಲ್ಲಿ ಗುರುತಿಸುತ್ತಿರುತ್ತೇವೆಯೋ ಅಥವಾ ನಮ್ಮ ಸಂದರ್ಭದ ಪ್ರಶ್ನೆ, ನಿರೀಕ್ಷೆ ಒತ್ತಡಗಳ ಹಿನ್ನೆಲೆಯಲ್ಲಿ ನಮಗೆ ಬೇಕಾದ ವ್ಯಕ್ತಿತ್ವದ ಚಹರೆಗಳನ್ನು ಮಾತ್ರ ಆ ಉಜ್ವಲ ವ್ಯಕ್ತಿತ್ವದಲ್ಲಿ ಕಂಡುಕೊಳ್ಳಲು ಪ್ರಯತ್ನಿಸುತ್ತಿರುತ್ತೇವೆಯೋ ?

ಎಲ್ಲಾ ಅಸಾಧಾರಣ ವ್ಯಕ್ತಿತ್ವಗಳನ್ನು ಕುರಿತಂತೆಯೂ ಈ ಪ್ರಶ್ನೆಗಳಿವೆ. ಕೊನೆಗೂ ಆ ಪ್ರಭಾವಶಾಲಿ ಚೇತನವು ನಮ್ಮ ಈ ಗಳಿಗೆಯ ತುರ್ತುಗಳಿಗೆ ಸ್ಪಂದಿಸುತ್ತದೆಯೋ ಇಲ್ಲವೋ ಎನ್ನುವುದು ಮೊದಲನೆಯ ನಿರೀಕ್ಷೆ. ಅದರ ಕಾಲಾತೀತತೆಯನ್ನು ಕುರಿತದ್ದು ಎರಡನೆ ನಿರೀಕ್ಷೆ. ಇವು ಒಂದನ್ನೊಂದು ಪರಿಪೂರ್ಣವಾಗಿ ಅವಲಂಭಿಸಿವೆ ಎನ್ನುವುದು ಸತ್ಯವಾದರೂ ಆದ್ಯತೆಯ ದೃಷ್ಟಿಯಿಂದ ಬಹುಶಃ ಹಿಂದು ಮುಂದಾಗಲಾರವು. ಸಾಹಿತ್ಯದ ವ್ಯಾಖ್ಯಾನವೇ ಹಿಂದೆಂದೂ ಕಾಣದ ವಿಸ್ತಾರವನ್ನು ಪಡೆಯುತ್ತಿರುವ ಸಾಹಿತ್ಯದ ಹಲವು ಬಗೆಯ ಓದುಗರು ಚಾಲ್ತಿಗೆ ಬರುತ್ತಿರುವ ಸಾಹಿತ್ಯೇತರ ಮಾನದಂಡಗಳೂ ಕಾವ್ಯದ ಅನನತ್ಯತೆಯನ್ನು ನಿರ್ಧರಿಸುತ್ತಿರುವ ಈ ದಿನಗಳಲ್ಲಿ ಅಕ್ಕಮಹಾದೇವಿಯನ್ನು ಕುರಿತ ಕವಯತ್ರಿಯರ ಅಧ್ಯಯನಗಳ ಪರಿಶೀಲನೆ ಎನ್ನುವುದು ಅನೇಕ ಕಾರಣಗಳಿಗಾಗಿ ಮುಖ್ಯವಾದುದೂ, ಕುತೂಹಲಕರವಾದುದೂ ಆಗಿದೆ.

ಕನ್ನಡ ಸಾಹಿತ್ಯ ಪರಂಪರೆಯಿಲ್ಲಿಯೇ ಸಕಾರಣವಾಗಿ, ನಿರಂತರ ಆರಾಧನೆಗೆ ಒಳಗಾದವರು ಅಕ್ಕಮಹಾದೇವಿ. ಅಕ್ಕನ ಪ್ರಸ್ತಾಪವಿಲ್ಲದೆ ವಚನ ಸಾಹಿತ್ಯವನ್ನು ಕನ್ನಡ ಮಹಿಳಾ ಸಾಹಿತ್ಯವನ್ನು ಕನ್ನಡದ ಶ್ರೇಷ್ಠ ಕವಿಗಳನ್ನು ಕುರಿತ ಯಾವ ಲೇಖನವೂ ಪೂರ್ಣಗೊಳ್ಳುವುದಿಲ್ಲ. ಅವಳ ಅಸೀಮ ಭಕ್ತಿಯನ್ನು, ಅನುಪಮವಾದ ಕಾವ್ಯಶಕ್ತಿಯನ್ನು, ಲೋಕೋತ್ತರವಾದ ಪ್ರೀತಿಯನ್ನು ವರ್ಣಿಸಲು ನಮ್ಮ ಆಧುನಿಕ ಕವಯತ್ರಿಯರು ಬಳಸದ ವಿಶೇಷಣಗಳಿಲ್ಲ.

ಅಕ್ಕಮಹಾದೇವಿಯನ್ನು ಕುರಿತು ಕನ್ನಡ ಸಾಹಿತ್ಯದಲ್ಲಿ ಆಧುನಿಕ ಕವಯತ್ರಿಯರು ಮಾಡಿರುವ ಅಧ್ಯಯನಗಳನ್ನು ಸ್ಥೂಲವಾಗಿ ಗುರುತಿಸಬಹುದು. ಅಧ್ಯಯನಗಳನ್ನು ನಾವು ಆಧುನಿಕ ಕನ್ನಡ ವಿಮರ್ಶೆಯ ಮೊದಲನೆಯ ಘಟ್ಟವಾದ 'ಪರಂಪರೆ ಮತ್ತು ಪರಿಸರ' ನಿರ್ಮಾಣದ ಹಿನ್ನೆಲೆಯಲ್ಲಿಟ್ಟು ನೋಡಬೇಕು. ವಸಾಹತುಶಾಹಿ ಅನುಭವ ಮತ್ತು ತತ್ಪರಿಣಾಮವಾದ ಸಾಂಸ್ಕೃತಿಕ ಸಂಘರ್ಷವು ನಮ್ಮನ್ನು ಪರಂಪರೆಯ ಪ್ರಯತ್ನಗಳಿಗೆ ಒತ್ತಾಯಿಸಿದ್ದು ನಿಜವಷ್ಟೆ ಎನ್ನುವ ಶಿಶಿರಕುಮಾರದಾಸ್‌ರವರ ವ್ಯಾಖ್ಯಾನವು ಕನ್ನಡದ ಮಾತ್ರವಲ್ಲ, ಒಟ್ಟು ಭಾರತೀಯ ನವೋದಯ ಸಂದರ್ಭದ ಅಗತ್ಯ – ಆಶಯಗಳನ್ನು ಶಕ್ತವಾಗಿ ಹೇಳುತ್ತದೆ. ಆದರೆ ಈ ಹೇಳಿಕೆಯ ಕೊನೆಯ ಮಾತಾದ ವಿಮರ್ಶೆಯು ಎಲ್ಲಾ ಹೊತ್ತಿಗೂ ಸಾಧ್ಯವಾಯಿತೆಂದು ಹೇಳಲಾಗುವುದಿಲ್ಲ.

ಭಾರತೀಯ ಸಮಾಜದಲ್ಲಿ ಆಗ ಆರಂಭವಾದ ಸಾಮಾಜಿಕ ಪುನರುಜ್ಜೀವನದ ಆಶಯಗಳ ಹಿನ್ನೆಲೆಯಲ್ಲಿ ಇಂಥವೇ ಆಶಯಗಳ ಸಾಕಾರ ರೂಪದಂತಿದ್ದ ವಚನ ಸಾಹಿತ್ಯ

ಸಹಜವಾಗಿಯೇ ಅಭಿಮನಕ್ಕೆ ಪಾತ್ರವಾಯಿತು. ಸಾಹಿತ್ಯಕ ಮತ್ತು ಸಾಂಸ್ಕೃತಿಕ ಪರಂಪರೆಯ ನಿರ್ಮಾಣದ ಗುರುತರ ಜವಾಬ್ದಾರಿ ಹೊತ್ತಿದ್ದ ನಾಡಿನ ಕವಯತ್ರಿಯರಲ್ಲಿ ವಚನ ಸಾಹಿತ್ಯ ಅಗತ್ಯವಾದ ಆತ್ಮವಿಶ್ವಾಸವನ್ನು ತುಂಬಿತು. ಆದ್ದರಿಂದ ಈ ವರ್ಗಕ್ಕೆ ಸೇರಿದ ಅಧ್ಯಯನಗಳ ಉದ್ದೇಶ ಸ್ಪಷ್ಟವಾಗಿದೆ. ಒಂದು ಸ್ಥಾಪಿತ ನಿಲುವಿನಿಂದ ಅವು ಹೊರಡುತ್ತವೆ. ಸರಳವಾಗಿ ಹೇಳಬೇಕೆಂದರೆ ಅಕ್ಕಮಹಾದೇವಿ ವಚನ ಚಳುವಳಿಯ ಸಾಧನೆಯ ಶಿಖರವಾಗಿ ಶೋಭಾಯಮಾನ ರತ್ನವಾಗಿ ಸ್ತ್ರೀಸಮಾನತೆಯ ಪ್ರತೀಕವಾಗಿ ಇಲ್ಲಿ ಕಾಣಿಸಿಕೊಳ್ಳುತ್ತಾಳೆ.

ಜಯಶ್ರೀದಂಡೆ ಹೇಳುವಂತೆ ಅಕ್ಕ ಸಮಾಜ ಸುಧಾರಕಳಲ್ಲ. ತೆನ್ನ ಪರಿಶುದ್ಧತೆಗಾಗಿ ಸಮಾಜ ಆಕೆಯ ತೆಕ್ಕೆಗೆ ಬಿದ್ದಿತು. ಆದರಿಂದ ವಿಮುಖಳಾಗಿ ಹೋಗುವುದು ಆಕೆಗೆ ಸಾಧ್ಯವಾಗಲಿಲ್ಲ. ತನ್ನ ಮಾರ್ಗ ಆಗಿದ್ದರೂ ಪಥಿಸಬೇಕಾದದ್ದು ಸಮಾಜದಲ್ಲಿಯೇ ತನ್ನ ವೈಯಕ್ತಿಕ ಸಾಧನೆಯ ಹಂತದಲ್ಲಿ ಸಮಾಜ ಬಹು ನಿಷ್ಠುರುವಾಗಿ ಕಂಡಿವೆ. ಲೋಕರೂಢಿಗಳು ಆಕೆಯನ್ನು ಪ್ರಶ್ನಿಸುತ್ತವೆ. ವ್ಯಂಗ್ಯ ನುಡಿಯುತ್ತವೆ. ಅನ್ನಬಾರದ್ದನ್ನೆಲ್ಲಾ ಅಂದು ತೀರಿಸಿಕೊಳ್ಳುತ್ತವೆ. ಹೀಗೆ ಬಾಳುವವರ ಪರಿಸರ, ಸಂಸ್ಕಾರ ಅಷ್ಟು ಮಟ್ಟದ್ದು ಆಗಿರುತ್ತದೆ. ಸಾಮಾಜಿಕ ಪರಿವರ್ತನೆ ಸಾಧ್ಯವಾಗದೆ ಹೋದಾಗ ತಾನು ಅದಕ್ಕೆ ಹೊಂದಿಕೊಂಡು ತನ್ನನ್ನು ಆ ರೂಪದಲ್ಲಿ ಸಿಲುಕಿಸಿಕೊಳ್ಳದಿದ್ದರೆ ಸಾಕು ಎಂಬ ತೀರ್ಮಾನಕ್ಕೆ ಬಂದಿದ್ದಾಳೆ. ಇಂಥ ಸಮಾಜಕ್ಕೆ ನೀತಿ ಹೇಳಿದರೂ ವ್ಯರ್ಥ ಎಂಬ ಅರಿವು ಅಕ್ಕನಿಗಿದೆ. ಅದಕ್ಕಾಗಿ ತನ್ನತಾನೇ ಮನವನ್ನು ಸಂತೈಸಿಕೊಳ್ಳುತ್ತ, ಪರಿಶುದ್ಧಳಾಗುತ್ತ ನಡೆದಳು. ಒಲ್ಲದ ಕುಟುಂಬ ಕಲಿಸಿದ ಪಾಠಕ್ಕಿಂತ ಸಮಾಜ ಕಲಿಸಿದ ಪಾಠವೇ ಹೆಚ್ಚು. ಗುರುವಿನಿಂದ ಪಡೆದ ಪಾಠ ತನ್ನಲ್ಲಿ ತಾನೇ ದೈವತ್ವವನ್ನು ಪಡೆದುಕೊಳ್ಳಲು ಮಾರ್ಗದರ್ಶಿಯಾದರೆ, ಸಮಾಜ ಪ್ರವಾಹದ ವಿರುದ್ಧ ಈಜಿ ದಡ ಸೇರುವುದು ಹೇಗೆ ಎಂಬುದನ್ನು ಕಲಿಸಿತು.

ಬಂದುದನ್ನು ಬಂದ ಹಾಗೆ ಸ್ವೀಕರಿಸಿದ ಅಕ್ಕ 'ನಾಳೆ ಬರುವುದು ಇಂದೇ ಬರಲಿ,ದ ಇಂದು ಬರುವುದು ಈಗಲೇ ಬರಲಿ, ಆಗೀಗ ಎನ್ನುವುದು ಬೇಡ' ಎಂದು ನಿರ್ಧರಿಸಿಬಿಟ್ಟಿದ್ದಾಳೆ.

ಹೆದರಿದರೆ ಹೆದರಿಸುವವರೇ ಹೆಚ್ಚು, ಆದರೆ ಯಾರಿಗಾಗಿ ? ಏತಕ್ಕಾಗಿ ? ಯಾವುದಕ್ಕಾಗಿ ಹೆದರಬೇಕು ಎಂಬುದು ಅಕ್ಕನಿಗೆ ಪ್ರಶ್ನೆಯಾಗಿದೆ. ಹೀಗೆ ಕುಗ್ಗುತ್ತಾ, ಮುದುಡುತ್ತಾ, ಮೃದುವಾಗುತ್ತಾ ಹೋದರೆ ಸಮಾಜ ಇನ್ನೂ ಕಠೋರ ಶಿಕ್ಷೆಯನ್ನೋ, ಕಷ್ಟವನ್ನೋ, ಕೊಟ್ಟು ದಂಡಿಸುತ್ತದೆ ಎಂಬುದನ್ನು ಜೀವನದುದ್ದಕ್ಕೂ ಅನುಭವಿಸಿದ್ದರಿಂದ ತನಗೆ ತಾನೇ ಸಂತೈಸಿಕೊಂಡಿದ್ದಾಳೆ. ಧೈರ್ಯ ತಂದುಕೊಂಡಿದ್ದಾಳೆ. ಇದನ್ನು ಅಕ್ಕನ ವಚನದ ಮೂಲಕ ಗಮನಿಸಬಹುದು.

"ಹೆದರದಿರು ಮನವೆ, ಬೆದರದಿರು ತನುವೆ
ನಿಜವನರಿತು ನಿಶ್ಚಿಂತನಾಗಿರು
ಫಲವಾದ ಮರನ ಕಲ್ಲಲಿ ಇಡುವುದೊಂದು ಕೋಟಿ
ಎಲವದ ಮರನ ಇಡುವರೊಬ್ಬರ ಕಾಣೆ
ಭಕ್ತಿಯುಳ್ಳವರ ಬೈವರೊಮದು ಕೋಟಿ
ಭಕ್ತಿಯಿಲ್ಲದವರ ಬೈವರೊಬ್ಬರ ಕಾಣೆ
ನಿಮ್ಮ ಶರಣರ ನುಡಿಯೆ ಎನಗೆ ಗತಿಸೋಪಾನ ಚೆನ್ನಮಲ್ಲಿಕಾರ್ಜುನ"

ಅಕ್ಕನ ವಚನ ಗಮನಿಸಿದರೆ, ಲೋಕ ವ್ಯವಹಾರವೇ ತೀರ ವಿಚಿತ್ರವಾದುದು. ಒತ್ತಿದರೆ ಒತ್ತಣ್ಣ, ಸರಿದರೆ ಸರಿಯಣ್ಣ ಎನ್ನುವಂತೆ ಮಾತಿನ ಮೊನಚಿಂದಲೇ ತೀರಿದು. ಅವರ ಸಾಧನೆಯನ್ನು, ಚಿಂತನೆಯನ್ನು ಹೀಯಾಳಿಸಿ, ನೆತ್ತಿಬಡಿದು ಕೂಡಿಸುವುದೇ ಸುಖವೆನಿಸುತ್ತದೆ. ಸಮಾಜ ಹೀಗೆ ಮಾಡುವುದರಿಂದಲೇ ತೃಪ್ತಿ ಪಡುತ್ತಾರೆ, ಸಂತೋಷ ಪಡುತ್ತಾರೆ. ಇಂಥವರಿಗೆ ಹೆದರಬೇಕಾಗಿಲ್ಲ. ತನು, ಮನ, ನನ್ನವು, ನನ್ನ ಅಧೀನದಲ್ಲಿರುವವು ಅವುಗಳಿಗಾಗಿ ಮತ್ತೊಬ್ಬರಿಗಂಜುವುದರಿಂದಾವ ನ್ಯಾಯ ? ಬರಡು ಮರಕ್ಕೆ ಯಾರೂ ತೆಕ್ಕೆ ಬೀಳುವುದಿಲ್ಲ. ಹಿಂಡುವ ಎಮ್ಮೆಯನ್ನು ಪ್ರೀತಿಸುವಂತೆ, ಫಲಬಿದ್ದ ಮರವನ್ನು ಪ್ರೀತಿಸುವವರು ಹೆಚ್ಚು. ಆ ಮರಕ್ಕೆ ನೀರುಣಿಸಿ, ಗೊಬ್ಬರ ಹಾಕಿ ಬೆಳಸದಿದ್ದರೂ ಅನುಭವಿಸುವ ಹೆಕ್ಕಿದೆ ಎಂಬಂತೆ ಉದ್ಧಟತನದಿಂದ ವರ್ತಿಸುತ್ತಾರೆ. ಬಿಟ್ಟ ಫಲಕ್ಕೆ ಕಲ್ಲನ್ನು ಎಸೆಯುತ್ತಾರೆ. ಆ ಫಲವನ್ನು ಹೇಗಾದರೂ ಮಾಡಿ ದಕ್ಕಿಸಿಕೊಳ್ಳಬೇಕೆಂದು ಹವಣಿಸುತ್ತಾರೆ. ಹಾಗೆಯೇ ಭಕ್ತಿಯುಳ್ಳವನನ್ನು ಬೈಯ್ಯುವವರು ಕೋಟಿ, ಕೋಟಿ ಭಕ್ತಿಯಿಲ್ಲದವರನ್ನು ಬೈಯ್ಯುವವರೇ ಇರುವುದಿಲ್ಲ ಇದು ಜಗದ ಮನುಷ್ಯ ಸ್ವಭಾವ, ಆ ಸತ್ಯದ ಅರಿವಿದ್ದೂ ನೋಯಬೇಕೆ ?

ಜಯಶ್ರೀ ದಂಡೆಯವರ ಸಾಮಾಜಿಕ ಚಿಂತನೆಯಲ್ಲಿ, ಸಮಾಜವನ್ನು ಅಕ್ಕ ಜಲಗಾರನಿಗೆ ಹೋಲಿಸಿದ್ದಾಳೆ. ಆ ಜಲಗಾರನ ಕೆಲಸವೇನೆಂದರೆ – ಜಲವನ್ನು ಹೊಕ್ಕು ಜಲಚರಗಳಿಗೆ ಬಲೆಬೀಸಿ ಹೊರತೆಗೆದು, ಅವುಗಳನ್ನು ಕೊಂದು ಆನಂದವನ್ನು ಪಡೆಯುತ್ತಾನೆ, ಕುಣಿದಾಡುತ್ತಾನೆ. ಇದು ಮಾನವೀಯತೆಯೇ ? ದಯೆಯಿಲ್ಲದ ಈ ಕೃತ್ಯಕ್ಕೆ ಏನೆನ್ನಬೇಕು ? ನಿಷ್ಕರುಣೆಯಿಂದ ಕೊಲ್ಲುವ ಅವನು ತನ್ನ ಮನೆಯ ಶಿಶು ಸತ್ತರೆ ಹೀಗೆ ವರ್ತಿಸಬಲ್ಲನೇ ? ಆ ಕರುಳಿಗಾಗಿ ಶೋಕಿಸುವ ಈತ ತನ್ನ ಕೈಯ್ಯಾರೆ ಕೊಂದ ಈ ಜೀವಹಾನಿಗೇಕೆ ಅಳಲಿಲ್ಲ ? ಇಂಥವನ ದುಃಖ ನಗೆಗೀಡಲ್ಲವೆ ? ಎಂದು ಇತ್ಯಾದಿಯಾಗಿ ಮರುಗುತ್ತದೆ ಅಕ್ಕನ ಮನಸ್ಸು.

ಸಮಾಜದ ಈ ತೆರನಾದ ಜನರು ಮರುಗುವುದಿರಲಿ ನಯವಂತಿಕೆಯ ಶಬ್ದವನ್ನಾದರೂ ಬಳಸಬಾರದೆ ? ದಯವಿಲ್ಲದ ಧರ್ಮ, ಉಭಯವಿಲ್ಲದ ಭಕ್ತಿ, ಗುಣಿಯಿಲ್ಲದ ಅವಗುಣಿಯ ಸಂಗ, ಎಲೆಯಿಲ್ಲದ ಮರ, ಜಲವಿಲ್ಲದ ನದಿ ಶೃಂಗಾರ. ನಡೆಯದ ನುಡಿಗಡಣ, ಮೂಡದ

ಕಲಿತನ ಯಾವುದೂ ಪ್ರಯೋಜನಕ್ಕೆ ಬರಲಾರದಂಥವು. ನಿಷ್ಪ್ರಯೋಜಕತೆಯ ಬೆನ್ನು ಹತ್ತಿದ ಜನರಿಂದ ಸಮಾಜ ಬದಲಾಗಬಹುದೇ ?

ಅಂತರಂಗ ಶುದ್ಧಿಯಿದ್ದವರು ಅನ್ಯ ಭಿನ್ನವನ್ನರಿಯರು, ಮನವನ್ನು ಕಕ್ಕಾಬಿಕ್ಕಿಯಾಗುವಂತೆ ಮಾಡರು, ಕೋಪವನ್ನು ತಾಳರು, ಅವರಿಗೆ ತಿಳಿದಿದೆ ಧರೆಯ ಮೇಲೆ ಹಿರಿದಪ್ಪಸಂತೆ ನೆರೆದಿದೆ ಎಂದು ಅರೆ ಮರುಳುತನ ನೆರೆ ಮರುಳುತನದಿಂದ ದೂರವಾಗಿ ನಿರೀಕ್ಷಿಸಿದಾಗ, ವಿಚಾರಿಸಿದಾಗ ತನ್ನನ್ನೇ ತಾನು ಪರಿವರ್ತಿಸಿಕೊಳ್ಳಬಹುದೆಂಬ ಆಸೆ ಅಕ್ಕನದು. ಇಂಥವರು ಎಂಥ ಪ್ರವಾಹಕ್ಕೂ ಕೊಚ್ಚಿಕೊಂಡು ಹೋಗರು ಎಂಬಲ್ಲಿ ಅಕ್ಕನಿಗೆ ವಿಶ್ವಾಸವಿದೆ. ಆದರೆ ಬಹಳಷ್ಟು ಜನ 'ಅವರಿಚ್ಚೆಯ ನುಡಿಯ ತನ್ನುದರವನ್ನು ಹೊರೆಯುವವರೇ', ಇಂಥ ಬಣ್ಣ ಬೆಚ್ಚಣಿಗಳಿಗೆ ಈ ಸಾಧನೆ ದೊರಕುವುದಿಲ್ಲ. ಎಂಬುದು ಆಕೆಯ ಸ್ಪೊಷ್ಟ ನಿಲುವು ಇಂಥವರಿಂದಲೇ ಲೋಕ ಕೆಟ್ಟು ಹಾಳಾಗಿ ಹೋಗುತ್ತದೆಂತಲೂ ಗೊತ್ತು. ಕೇವಲ ಉದರ ಪೋಷಣೆಯೇ ಪ್ರಮುಖ ಅಲ್ಲ. ಅದಕ್ಕಾಗಿ ಅಮಾನವೀಯತೆಯಿಂದ ವರ್ತಿಸಿ, ಮಹಾತಪಮಾನಕ್ಕೆ ಗುರಿಮಾಡಿ ನೋಯಿಸಬಾರದು. ಎಂಬ ಸಂದೇಶವನ್ನು ಕೊಡುತ್ತಾಳೆ. ತನಗೇನೋ ಸದಾ ಚೆನ್ನಮಲ್ಲಿಕಾರ್ಜುನನ ಚಿಂತೆ. ಲೋಕದ, ಲೋಕದ ಮಾತಿನ ಪರಿವೆಯೇ ಇಲ್ಲ. ಆದರೆ ಎಷ್ಟೋ ಅಮಾಯಕರು ಮಾತಿಗಾಗಿಯೇ ಮರಣವಪ್ಪಬೇಕಾಗಿ ಬಂದರೂ ಆಶ್ಚರ್ಯಪಡಬೇಕಾಗಿಲ್ಲ. ಅಂಥವರ ಗತಿಗಾಗಿ ಚಿಂತಿಸಿದ್ದಾಳೆ.

ಮಾಡುವುದೆಲ್ಲಾ ಅನಚಾರ ಬಯಸುವುದು ಪುಣ್ಯ ಎಂದರೆ ಹೇಗೆ ದೊರಕೀತು ? ಹಗಲು ನಾಲ್ಕು ಜಾವ ಆಹಾರಕ್ಕಾಗಿ ಕುದಿದು, ಇರುಳು ನಾಲ್ಕು ಜಾವ ವ್ಯಸನಕ್ಕೆ ಕುದಿದು ಜೀವಿಸುವುದು ಲೋಕದ ವರ್ತನೆ. ಇದು ಹೇಗಾಗ ಬಲ್ಲುದೆಂದರೆ 'ಅಗಸ ನೀರೊಳಗಿರ್ದು ಬಾಯಾರಿ ಸತ್ತಂತೆ' ಹೀಗೆಯೇ ನಮ್ಮೊಳಗಿದ್ದ ಮಹಾಘನದ ಅರಿವಿಲ್ಲದೆ ವೃಥಾ ಪ್ರಲಾಪ ಜೀವಕ್ಕೆ ಬರುತ್ತದೆಂಬುದನ್ನು ಇಲ್ಲಿ ತಿಳಿಯಬೇಕಾಗುತ್ತದೆ.

ಲೋಕದ ಮಾತಿಗೆ ಮರುಳಾಗದೆಯೇ ಇರುವ ಕಲೆಯನ್ನು ರೂಢಿಸಿಕೊಳ್ಳಬೇಕಾಗಿದೆ. ಉದರ ಪೋಷಣ ನಿಮಿತ್ತ ಬಹುಕೃತ ವೇಷ ಧರಿಸಿ ಮನಬಂದಂತೆ ಹೊಗಳಿ, ಹೊಗಳಿಸಿಕೊಳ್ಳುವುದನ್ನು ಅಕ್ಕ ಪ್ರಶ್ನಿಸುತ್ತಾಳೆ. ಜನರ ವರ್ತನೆ, ಸ್ವಭಾವಗಳನ್ನು, ಅಂತರಂಗದಿಂದ ತಿಳಿದುಕೊಳ್ಳುವುದು ಕಷ್ಟಡ. ಅರುಹು – ಮರುಹಿನಾಟ ಪ್ರತಿಯೊಬ್ಬರಲ್ಲಿಯೂ ನಡೆದೇ ಇರುತ್ತದೆ. ಜೀವನದ ಎಷ್ಟೋ ಮಹತ್ತರ ಕ್ಷಣಗಳನ್ನು ವೃಥಾ ಹಾನಿಮಾಡಿಕೊಳ್ಳುತ್ತೇವೆ. ಹೋದುದು ಮತ್ತೆ ಬಾರದು ಎಂಬ ಅರಿವಿದ್ದೂ, ಅದರಂತೆ ನಡೆದುಕೊಳ್ಳುವುದಿಲ್ಲ. ಇದು ಮೂರ್ಖತನವಲ್ಲದೆ ಮತ್ತೇನಿಲ್ಲ. ಒಳ್ಳೆಯವರ ಸಂಗದಿಂದ ಬಂದ ಸಮಸ್ಯೆಗಳನ್ನು ಬಗೆಹರಿಸಿಕೊಳ್ಳಬಹುದಾದರೂ ಅದರ ಬಗ್ಗೆ ಹಂಬಲ ಇರುವುದಿಲ್ಲ. ಇರಿಯದವರತ್ತ ಎಳೆಯುವುದೇ ಹೆಚ್ಚು. ಹೀಗೆ ಅರಿಯದವರ ಕೂಡೆ ಅಧಿಕ ಸ್ನೇಹ ಮಾಡುವುದು ಎಂದರೆ 'ಕಲ್ಲ ಹೊಯ್ದು ಕಿಡಿಯ ತೆಗೆದುಕೊಂಬಂತೆ' ಇದರಿಂದ ಯಾರಿಗೂ ಪ್ರಯೋಜನವಾಗುವುದಿಲ್ಲ. ಆದರೆ ಅದೇ

ಬಲ್ಲವರೊಂದಿಗೆ ಸಂಗ – ಸ್ನೇಹ ಮಾಡಿದ್ದಾದರೆ 'ಮೊಸರ ಹೊಸೆಯ ಬೆಣ್ಣೆಯ ತೆಗೆದುಕೊಂಬಂತೆ' ಆಗುತ್ತದೆ. ಇದರಿಂದ ಹಿತವಿದೆ, ಲಾಭವಿದೆ, ಶರಣರ ಸಂಗವನ್ನು ಮಾಡಿದರಂತೂ 'ಕರ್ಪೂರದ ದಗಿರಿಯನ್ನು ಉರಿದುಕೊಂಬಂತೆ' ಆಗುತ್ತದೆ.

ಜಯಶ್ರೀ ದಂಡೆಯವರು ಗಮನಿಸಿದಂತೆ ಸಮಾಜದ ಅತಿದೊಡ್ಡ ಬಿರುಕಿಗೆ ಕಾರಣ ಜಾತಿ – ಕುಲ, ಧರ್ಮದಿಂದ ಸಿಡಿದು ನಿಂತ.... ಕುಲ – ಜಾತಿಯು ಮದುವೆಯಂಥ ಮಹತ್ವದ "ಘಟ್ಟದಲ್ಲಿ ಹೆಚ್ಚು ಕಾಡುತ್ತದೆ. ಕೌಶಿಕ ಒಂದು ವೇಳೆ ಸಜಾತಿಯವನಾಗಿದ್ದಿದ್ದರೆ ಸಂಸಾರ ಮುರಿದು ಬೀಳುತ್ತಿರಲಿಲ್ಲವೇನೋ ? ದ್ವಂದ್ವ ಅಕ್ಕನನ್ನು ಬಾಧಿಸಿರಲೇಬೇಕು. ತಾನೇ ಹೇಳುತ್ತಾಳೆ. ತನ್ನ ಮಲ್ಲಿಕಾರ್ಜುನನ ಕೂಡಿದ ಮೇಲೆ ಕುಲವುಂಟೇ ? ಎಂದೂ, ಮತ್ತೊಮ್ಮೆ ಕುಲವಳಿದವಳಲ್ಲ ಎನ್ನುತ್ತಾಳೆ. ಅಂದಿನ ಕಾಲದಲ್ಲಿ ಜಾತಿ ಭೀತಿ, ಜಾತಿ ಭಿನ್ನತೆಗಳು ಸಮಾಜವನ್ನು ಹೆಚ್ಚು ಕಾಡಿವೆ. ಚೆನ್ನಮಲ್ಲಿಕಾರ್ಜುನನನ್ನು ಗಂಡನನ್ನಾಗಿ ಸ್ವೀಕರಿಸಿದಕ್ಕಾಗಿ ತಾನು ಸರ್ವಸಂಗ ಪರಿತ್ಯಾಗ ಮಾಡಿದವಳಲ್ಲ ಎಂಬುದು ಎಷ್ಟು ಪ್ರಾಮಾಣಿಕವೋ ಅಷ್ಟೇ ಚೆನ್ನಮಲ್ಲಿಕಾರ್ಜುನನನ್ನು ಕೂಡಿದ ಮೇಲೆಯೂ ಕುಲವಳಿಯೆಲಿಲ್ಲವೆಂಬುದು ಅಂದರೆ ಕುಲದ ಪ್ರಭಾವ ಅಂದು ಸಮಾಜದ ಮೇಲೆ ಎಂಥ ಪರಿಣಾಮ ಬೀರಿತ್ತು ಎಂಬುದು ಸ್ಪಷ್ಟವಾಗುತ್ತದೆ.

ದೇವನಿಗೆ ಕುಲವುಂಟೆ ? ಕುಲಾದಿ ಮದಗಳುಂಟೆ ? ಸಕಲ ಲೋಕದ ಜನಕ್ಕೆ ಇದೇ ಮತವಾಗಿರಬೇಕು. ಆಗ ಸಮಾಜ ಸುಂದರವಾಗುತ್ತದೆ. ಜಾತಿ ಕುಲ – ಮತ ಭ್ರಮೆಗಳು ಪಾಶದಂತೆ. ಸದಾ ತೊಳಲಿ – ಬಳಲಿ ಬೇಯಿಸುತ್ತವೆ. ವೇಷ ಧರಿಸುವ ಮಾತ್ರದಿಂದ ಈ ಕುಲದವರು ಎಂದು ಗುರುತಿಸಿಕೊಳ್ಳುವುದು ಒಂದು ಹಂತದಲ್ಲಿ ಹೇಸಿಕೆಯನ್ನು ಹುಟ್ಟಿಸುತ್ತವೆ. ಶಿವನು ಅಯೋನಿ ಸಂಭವನು. ಅವನಿಗೆ ಕುಲಮದ ಬರಲು ಸಾಧ್ಯವೇ ಇಲ್ಲ. ಇಂಥ ಶಿವನನ್ನು ನಂಬಿದ ಶರಣರೂ ಆ ಕಾಯ ಚರಿತ್ರರೇ. ಜಾತಿ – ಅಜಾತಿ ಎಂದು ಆಶಿಸುವವರಿಗೆ ಎಂಥ ಫಲ ಸಿಗಬಹುದೆಂಬುದನ್ನು ಅಕ್ಕ ಗುರುತಿಸಿದ್ದಾಳೆ.

> "ಜಾತಿಶೈವ ಅಜಾತಿಶೈವವೆಂದೆರಡು
> ಪ್ರಕಾರವಾಗಿಹುದಯ್ಯ
> ಜಾತಿಶೈವರೆಂಬುವರು ಶಿವಂಗೆ ಭೋಗಸ್ತ್ರೀಯರಯ್ಯ ।
> ಅಜಾತಿಶೈವರೆಂಬುವರು ಶಿವಂಗೆ ಕುಲಸ್ತ್ರೀಯರಯ್ಯ ।"

ಹೀಗೆ ಹೇಳುವಾಗಲೂ ಮತ್ತೆ – ಮತ್ತೆ ಕುಲಸ್ತ್ರೀ ಎಂದೇ ಹೇಳಿರುವುದು ಗಮನಾರ್ಹ. ಈ ಎರಡೂ ಶೈವದ ಆಚರಣೆಗಳು ಭಿನ್ನವಾಗಿರುವುದರಿಂದ ಹೀಗೆ ಹೇಳಿದರೂ ಜಾತಿಯಿಲ್ಲದವರು ಹೇಗೆ ಕುಲಸ್ತ್ರೀಯರಾದರು ಎಂಬುದು ಪ್ರಶ್ನೆ. ಸರ್ವಭೋಗ ಬಯಸಿ ಮಾಡುವವರು ಜಾತಿ ಹಿಡಿದವರು. ಗುರು – ಲಿಂಗ ಜಂಗಮಕ್ಕೆ ತನು – ಮನ ಧನವನ್ನು

ಸಮರ್ಪಿಸಿಕೊಂಡು ಸರ್ವಸೂತಕರಹಿತರಾಗಿ ಜಾತಿಯೇ ಇಲ್ಲದವರಾಗುತ್ತಾರೆ. ಇಂಥವರಿಗೆ ಚೆನ್ನಮಲ್ಲಿಕಾರ್ಜುನ 'ಭಕ್ತಿಕಾಯೆ'ವೆಂಬ ಐಕ್ಯಪಥವನ್ನು ಕೊಡುತ್ತಾನೆಂದು ನಂಬಿಕೆ ಆಕೆಗೆ. ಹೀಗಾಗಿಯೇ ತಾನು ಕುಲಸೀಮೆ ಇಲ್ಲದ ನಿಸ್ಸೀಮ ಚೆಲುವನಿಗೆ ಒಲಿದದ್ದು ಎಂದೂ ಸಮರ್ಥಿಸಿಕೊಂಡಿದ್ದಾಳೆ.

ಅಲ್ಲದೆ ಗಂಡು ಹೆಣ್ಣು ಎಂಬವು ಎರಡೂ ಭಿನ್ನವಲ್ಲ. ಅಂಗದ ಆಧಾರದ ಮೇಲೆ ಭಿನ್ನವಾದರೂ ಶರೀರ ರಚನೆಯಲ್ಲಿ ನೈಸರ್ಗಿಕ ಬದಲಾವಣೆಗಳಿದ್ದರೂ ಹುಟ್ಟು ಮಾತ್ರ ಇಬ್ಬರಿಗೂ ಸಮಾನವೇ ಅಲ್ಲವೇ ? ಮಾಯೆ ಎಂಬುದು ಹೆಣ್ಣು ಎಂದಷ್ಟೇ ಅಲ್ಲ. ಪುರುಷನಿಗೆ ಸ್ತ್ರೀ, ಸ್ತ್ರೀಗೆ – ಪುರುಷ ಎರಡು ಮಾಯೆಯೇ ಎಂದು ಹೇಳಿ ಎರಡರ ನಡುವಿನ ಭಿನ್ನತೆಯನ್ನು ಹೋಗಲಾಡಿಸಲು ಪ್ರಯತ್ನಿಸಿದ್ದಾಳೆ. ತಾನು ತನ್ನ ಸಂಸ್ಕಾರ, ನಡೆ – ನುಡಿ, ತನ್ನ ವ್ಯಕ್ತಿತ್ವದ ಬಗ್ಗೆ ಆಕೆಗೆ ಅಪಾರ ಗೌರವ ಹೆಮ್ಮೆ ಇದೆ. ತನ್ನನ್ನು ಈ ಹಿನ್ನೆಲೆಯಲ್ಲಿ ಆಕೆ ಗುರುತಿಸಿಕೊಳ್ಳುವ ರೀತಿಯೇ ಬೇರೆಯಾಗಿದೆ. ನಾಮದಲ್ಲಿ ಹೆಂಗಸೂ ಎಂಬ ಹೆಸರಾದಡೇನು ? ಭಾವಿಸಲು ಗಂಡು ರೂಪು ನೋಡಾ' ಎಂದು ನಾಚಿಕೆ ಹೆಣ್ಣಿಗಷ್ಟೇ ಅಲ್ಲ ಇಬ್ಬರಿಗೂ ಇರುವಂತಹದೆ. ಭೌತಿಕ ದೇಹದ ರೂಪು ರಾಶಿ ಕಂಡು ಮರುಳರಂತೆ ವರ್ತಿಸುವರಿಗೆ ಈ ರೀತಿಯಾಗಿ ಎಚ್ಚರಿಸಿ, ಅಸಮಾನತೆಯನ್ನು ಹೋಗಲಾಡಿಸಲು ಪ್ರಯತ್ನಿಸುತ್ತಿದ್ದಾಳೆ.

ಕೆಲವು ಕವಯತ್ರಿಯರು ಹೇಳುವಂತೆ ಪರಧನ – ಪರಸ್ತ್ರೀಯ ಬಗ್ಗೆ ಇಲ್ಲದ ವ್ಯಾಮೋಹ ಯಾವನೋ ಸಾಧಕ ಜಂಬದಿಂದ ತಾನೊಬ್ಬ ಅಖಂಡ ಜ್ಞಾನಿ ಎಂದು ಹೇಳಿಕೊಳ್ಳಬಹುದು. ಆದರೆ ಹಾಗಂದುಕೊಂಡ ಮಾತ್ರಕ್ಕೆ ಅವನು ಸಂದು ಸಂಶಯವಿಲ್ಲದ ಅಖಂಡಜ್ಞಾನಿಯಾಗಬಲ್ಲನೆ ? ಖಂಡಿತ ಇಲ್ಲ.

ಏಕೆಂದರೆ ಅವನೊಳಗೆ ಮರೆಯಾಗಿ ಅವಿತುಕೊಂಡ ಪರಧನ ಪರಸ್ತ್ರೀಗೆ ಅಳುಪುವ ದುರಾಸೆ ಇನ್ನೂ ಕಡಿಮೆ ಆಗಿರುವುದಿಲ್ಲ. ಎರಡರ ಹಂಗನ್ನು ಪ್ರಾಮಾಣಿಕವಾಗಿಯೇ ಕಳೆದುಕೊಂಡವರಿಗೆ ಯಾವ ಭಯವಿರುವುದಿಲ್ಲ. ತ್ರಿಕರಣ ಶುದ್ಧರಾಗಿ ತ್ರಿವಿಧ ಲಿಂಗಾಂಗ ಸಂಬಂಧಿಯಾದವರು. ಪರಸತಿ – ಪರಧನವನ್ನೆಂದೂ ಬೆರಸರು ಎಂಬುದು ಅಕ್ಕನ ವಿಶ್ವಾಸವಾಗಿದೆ. ಏಕೆಂದರೆ ತಮ್ಮ ಆಧುನಿಕ ಕವಯತ್ರಿಯರು ಗಮನಿಸುವಂತೆ ಏನೆಲ್ಲಾ ಆಸೆಗಳನ್ನು ಇಟ್ಟುಕೊಳ್ಳುವ ಮೂಲಕವಾಗಿ ಸುಖ – ದುಃಖಗಳು ಹೆಚ್ಚು ಬಾಧಿಸುತ್ತವೆ. ಅಕ್ಕಮಹಾದೇವಿ ಅಲೌಕಿಕ ಗಂಡನನ್ನು ಪಡೆದು ಅನಂತ ಸುಖದ ಕನಸನ್ನು ಕಂಡಾಕೆ. ಅದನ್ನು ನನಸಾಗಿಯೂ ಮಾಡಿಕೊಂಡಾಕೆ. ಹಾಗಾಗಿ ಆಕೆಯಲ್ಲಿ ಲೌಕಿಕ ಸುಖ – ದುಃಖದ ಚಿಂತನೆಗಿಂತ ಅಲೌಕಿಕದ ಸುಖದುಃಖದ ಚಿಂತನೆಯೇ ಹೆಚ್ಚಾಗಿದೆ. ಚೆನ್ನಮಲ್ಲಿಕಾರ್ಜುನ ಒಲ್ಲದ ಸುಖ ಅಕ್ಕನಿಗೆ ದುಃಖವಾಗಿ ಅವನೊಲಿದ ದುಃಖವೇ ಪರಮಸುಖವಾಗಿ ಪರಿಣಮಿಸಿದೆ. ಅವನಿಂದ ಆಯುತ – ಸ್ವಾಯುತ – ಸನ್ನಿಹಿತ ಸುಖವನ್ನು ಅನುಭವಿಸಿದ್ದಾಳೆ. ಅಕ್ಕಮಹಾದೇವಿ 'ಭಿನ್ನ' ಸುಖಕ್ಕೆ ಆಸೆಮಾಡದ ಒಡಲಿಲ್ಲದ, ಕಡೆಯಿಲ್ಲದ, ನುಡಿಯಿಲ್ಲದ ನಲ್ಲನ ಒಡಗೂಡಿ ಸುಖಿ ಆಗಿದ್ದಾಳೆ.

ಆಕೆಯ ಆರ್ತಮೊರೆಯನ್ನು ಚೆನ್ನಮಲ್ಲಿಕಾರ್ಜುನ ಕೇಳದೇ ಹೋದರೆ ಅದುವೇ ದುಃಖವಾಗಿದೆ. ಕಾಳು ಇಲ್ಲದ ಹೊಟ್ಟನ್ನು ಬಿತ್ತಿ, ದಣಿದು ಅದಕ್ಕೆ ನೀರು ಹಾಕಿದರೆ ಅದರಿಂದ ಬೆಳೆ ಬರುವುದೇ ? ಹಾಗೆಯೇ ಅರಿವಿಲ್ಲದವರಿಗೆ ಆಚಾರವಿದ್ದರೆ ಸುಖವಿಲ್ಲ. ಸುಖದ ಸುಖಿಗಳ ಸಂಭಾಷಣೆಯಲ್ಲಿ ತೊಡಗಿದರೆ ಮಾತ್ರ ದುಃಖಕ್ಕೆ ವಿಶ್ರಾಮ. ಇಂಥ ಮಹಾಂತರ ಕೂಡಿದ ಸುಖವನ್ನು ಉಪಮಿಸಿ ಹೇಳಲು ದುಃಖ, ಉದ್ವೇಗ, ಹೀಗೆ ಅನಗತ್ಯ ಉದ್ವೇಗಕ್ಕೆ ಒಳಗಾಗುವುದಕ್ಕಿಂತ ಸಾಯುವುದೇ ಮೇಲೆನಿಸಿದೆ. ಮಲ್ಲಿಕಾರ್ಜುನನೊಲಿದ ಶರಣರಿಗೆ ನಿಸ್ಸೀಮ ಸುಖ ಎಂಬುದರಲ್ಲಿ ಸುಖ ಎಂಬುದರಲ್ಲಿ ಸಂಶಯವಿಲ್ಲ. ನಿತ್ಯ ಸುಖಿಗಳಾದ ಶರಣರನ್ನು ನೋಡುವುದು, ನುಡಿಸಿ ಮಾತನಾಡಿಸುವುದು ಒಂದು ಅನುಪಮ ಸುಖ. ಬುದ್ಧಿಗೇಡಿತನದಿಂದ ಇಂಥ ಸುಖವನ್ನು ಹಾಳು ಮಾಡಿಕೊಳ್ಳುವವರೇ ಹೆಚ್ಚು. ಚೆನ್ನಮಲ್ಲಿಕಾರ್ಜುನನ ಕೂಟವೆ ಪರಮಸುಖ ಎಂಬುದನ್ನು ಎಷ್ಟು ಜನ ಬಲ್ಲರು ? ಎನ್ನುವುದು ಆಕೆಯ ಮುಂದೆ ಇರುವ ಪ್ರಶ್ನೆ ಆಯುಷ್ಯವುಳ್ಳ ಅಕ್ಕ ಲಿಂಗಸುಖಿಗಳ ಸಂಗದಲ್ಲಿಯೇ ದಿನಕಳೆಯಬೇಕೆಂಬುದೇ ಆಕೆಯ ಮನದಿಂಗಿತ ಸಂಗದಿಂದಲೇ ಸರ್ವಸುಖ ತೋರುತ್ತದೆ. ಶರಣರ ಅನುಭವ ಸುಖದಿಂದ ತಾನು ಪರಮ ಸುಖಿಯಾದುದಕ್ಕೆ ಶರಣರಿಗೆ ಕೃತಜ್ಞಳಾಗಿದ್ದಾಳೆ ಹೇಡಿಯಾದವರು. ಎಲ್ಲಿಗೆ ಹೋದರೂ, ಎಲ್ಲಿಯೇ ಇದ್ದರೂ, ಅವರಿಗೆ ಸುಖವಿಲ್ಲವೆಂಬುದು ಆಕೆಗೆ ಚೆನ್ನಾಗಿ ತಿಳಿದಿದೆ. ಶಿವಸುಖರಸದೊಳಗೆ ಓಲಾಡುವವರಿಗೆ ದುಃಖವೇ ಇಲ್ಲ.

ಇಂಥ ಬೆಚ್ಚಿ ಬೇರಾಗುವ ನಿಜಸುಖದೊಳಗೆ ತಾನು ಎಂದೂ ಇರುವೆನೆಂಬ ಚಿಂತೆ ಆಕೆಗೆ. ನಾನಳಿದು ನೀನುಳಿಯುವ ಸುಖ ಬೇಕೆಂದು ಹಾರೈಸುವ ಅಕ್ಕನಿಗೆ ಗೊತ್ತು ಭಾವವಿಲ್ಲದ ಬಯಲು ಸುಖ ಬಹುಮುಖರಿಗೆ ಭಾವಿಸಿದರೆ ಸಿಗುವಂತಹದ್ದಲ್ಲ. ಎಂದೂ, ಕಾರಣ ತನುವಲ್ಲಿ ಜರೆದು ಮನವನ್ನು ನಿಮ್ಮೊಳಗೊಂದಾಗಿಸುವ ಘನಸುಖದೊಳಗೋಲಾಡುವ, ಮುಂದುವರಿಯುವ ಪಥವನ್ನು ತೋರಯ್ಯಾ ಎಂದು ಮೊರೆಯಿಟ್ಟಿದ್ದಾಳೆ. ಲಿಂಗಾಂಗ ಸಂಗ ಸಮರಸ ಸುಖದಲ್ಲಿ ಮನವೇದ್ಯವಾಗಬೇಕೆಂಬುದೇ ಆಕೆಯ ಆಸೆ, ಆ ಸಮರಸದ ಪರಮಸುಖದ ಪರಿಣಾಮ ಮನಮೇರೆದಷ್ಟಿ ಕೊಡಬೇಕು.

ಅಲ್ಲಿ ಓಲಾಡುವ ಬಯಕೆ ಅಕ್ಕನದು. ಅಯ್ಯಾ ಮಲ್ಲಿಕಾರ್ಜುನನೇ ನನ್ನಿ ಮೊರೆಯನ್ನು ಆಲಿಸಿದರೆ ಆಲಿಸು, ಬಿಟ್ಟರೆ ಬಿಡು. ನನ್ನ ದುಃಖವನ್ನು ನೋಡಿದರೆ ನೋಡು, ನೋಡದಿದ್ದರೆ ಬಿಡು, ನಾನು ಮಾತ್ರ ನಿನ್ನ ಬೆರೆಸಿ ಸುಖಿಸುವೆನೆಂಬ ನಿಶ್ಚಲ ನಂಬಿಕೆ ಅಕ್ಕನದು.

ಕಾಲಾನುಕಾಲದಿಂದ ಬೆಳೆದುಕೊಂಡು ಬಂದ ಸಾಂಪ್ರದಾಯಿಕ ಕರ್ಮಠತನದ ಆಚರಣೆಗಳು ಅಕ್ಕನಿಗೆ ಹಿಡಿಸಲಿಲ್ಲ. ಧರ್ಮದಿಂದಲೇ ಹುಟ್ಟಿಕೊಂಡ ಹಲವು ದೇವರ ಪೂಜೆ, ಕರ್ಮ, ವಿಧಿ, ಪುಣ್ಯ, ಪಾಪ, ಸ್ವರ್ಗ, ನರಕ ಇಹಪರ ಇತ್ಯಾದಿಗಳ ಬಗ್ಗೆ ಅಕ್ಕ ಸೂಕ್ಷ್ಮವಾಗಿ ಚಿಂತನೆ ಮಾಡಿದ್ದಾಳೆ. ಕರ್ಮದ ತೊಡರು ತೊಡಕಿಗೆ ಕಾರಣವಾಗಬಹುದಾದ ಅರಿಷಡ್ ವೈರಿಗಳನ್ನು ಶಿವಶರಣರೆಂಬ ಅಲಗಿನಿಂದ ತುಂಡರಿಸಿ ಗೆಲ್ಲುವ ಸಾಮರ್ಥ್ಯವನ್ನುಳ್ಳ ಆಕೆ. ಹೀಗಾಗಿ

ಕರ್ಮಕ್ಕೆ ಹೇಳುತ್ತಾಳೆ, 'ನಿನ್ನನ್ನು ಕೊಲ್ಲದೆ ಬಿಡೆನು' ಎಂದು. ಈ ತೆರನಾದ ನಿಷ್ಠೆಯನ್ನು ಯಾರು ಬೆಳೆಸಿಕೊಂಡಿರುತ್ತಾರೆಯೋ ಅಂಥವರನ್ನು ಕರ್ಮದ ಬಾಧೆ ಕಾಡದು. ಪಾಪ ಪ್ರಜ್ಞೆಯಿಂದ, ಭೀತಿಯಿಂದ ಹುಟ್ಟಿಕೊಳ್ಳಬಹುದಾದ ಕರ್ಮದ ಗೊಡವೆ ಅಕ್ಕನಿಗೆ ಇಲ್ಲ. ಲಿಂಗಾಂಗ ಸಮರಸಾನಂದ ಸುಖಿಯಾದವರಿಗೆ ಪಾಪ – ಪುಣ್ಯ ಎಂಬವು ಇಲ್ಲವೇ ಇಲ್ಲ. ಅಂದ ಮೇಲೆ ಕರ್ಮದ ಮಾತೇ ಇಲ್ಲ. ಕರ್ಮಕ್ಕೆ ಸ್ವರ್ಗ, ನರಕ ಎಂಬುದುಂಟಲ್ಲವೇ ಲಿಂಗಕ್ಕಲ್ಲ ಎಂಬ ಅರಿವು ಬೇಕು. ಈ ಅರಿವನ್ನು ಯಾರು ಸಂಪಾದಿಸಿಕೊಂಡಿಲ್ಲವೋ ಅವರು ಕಷ್ಟಕರ್ಮಿಗಳು. ಕಷ್ಟ ಕರ್ಮಿಗಳಾದವರ 'ಕಟಿಹಾದ ಬಿದಿರಿನಲ್ಲಿ ಮತ್ತೆ ಕಳಲೆ ಮಾಡದಂತಹದು. ಸುಟ್ಟ ಮಡಿಕೆಯೊಂದು ಮೊದಲಿನಂತೆ ಮತ್ತೆ ಮುಕ್ಕಾಗದಂತಹದು.

ತೊಟ್ಟು ಬಿಟ್ಟ ಹೆಣ್ಣೊಂದು ಮತ್ತೆ ತೊಟ್ಟಪ್ಪದಂತಹದು. ಇಂಥವರು ತಮ್ಮ ಮನಬಂದಂತೆ ನುಡಿದ ಮಾತ್ರಕ್ಕೆ ಮರಳಿ ನಿಷ್ಠೆಯುಳ್ಳ ಶರಣರು ಮರ್ತ್ಯಕ್ಕೆ ಬರಬಹುದೇ ? ಅಂದರೆ ಕರ್ಮಕಾರಣವಾಗಿ ಬರಬಹುದಾದ ಪುನರ್ಜನ್ಮದ ಹೊರೆಯೂ ಶರಣರಿಗೆ ಇಲ್ಲ ಎನ್ನುತ್ತಾಳೆ. ಕವಯತ್ರಿಯರು ಹೇಳುವಂತೆ ಕರ್ಮದ ಕುರಿತಾಗಿ ಇಷ್ಟು ಸ್ಪಷ್ಟ ಅರಿವಿದ್ದರೂ ಕೂಡಾ ವಿಧಿಯನ್ನು ತನ್ನ ತೊಡರುಗಳ ಕಾರಣವಾಗಿ ಕೆಲ ಸಂದರ್ಭಗಳಲ್ಲಿ ಮನ್ನಿಸಿದ್ದಾಳೆ. ಆಗ ಆಕೆಯ ಮನಸ್ಸು ವಿಧಿಯ ಬಗ್ಗೆ ಯೋಚಿಸಿದ್ದು ಸಾಮಾನ್ಯರಂತೆಯೇ ವಿಧಿಯ ಮೀರುವ ಅಮರರಿಲ್ಲ ಎಂದು ಹೇಳಿಬಿಡುತ್ತಾಳೆ. ಕ್ಷುಧೆ, ವ್ಯಸನ, ವಿಧಿಗಂಜಿ ತಾನು ಚೆನ್ನಮಲ್ಲಿಕಾರ್ಜುನನ ಮೊರೆ ಹೊಕ್ಕೆನೆಂದೂ ಹೇಳುತ್ತಾಳೆ. ಈ ವಿಧಿಗೆ ಒಳಗಾಗಿಸುವವನು ಕೂಡಾ ದೇವರೇ. ಹುಟ್ಟದ ಯೋನಿಯಲ್ಲಿ ಹುಟ್ಟಿಸಿ, ಬಾರದ ಭವಂಗಳಲ್ಲಿ ಬರಿಸಿ, ಉಣ್ಣದ ಊಟವನ್ನು ಉಣ್ಣಿಸಿ ವಿಧಿಗೊಳಗಾಗಿಸುತ್ತಾನೆ. ತನಗೂ ಇದುವೇ ಗತಿಯಾಗಬೇಕೆ ? ಅವನಿಗೆ ನನ್ನವರು – ತನ್ನವರು, ಅನ್ಯರು ಎಂಬ ಭಿನ್ನವೆ ಇಲ್ಲವೇ ? ಈ ವಿಷಯದಲ್ಲಿ ಕಡಿತವೇ ಇಲ್ಲವೇ ? ಏಕೆ ನಿಷ್ಠುರನಾಗುತ್ತಿದ್ದೇನೆ ಎಂದರೆ ಶಿವ ತನ್ನ ಹತ್ತಿರವಿದ್ದ ಭೃಂಗಿಯ ಚರ್ಮವನ್ನೇ ಕಿತ್ತೀಡಾಡಿಸಿದನು. ಇಂಥ ದೂರ್ತನವನು. ಇನ್ನು ಬೇರೆಯವರನ್ನು ಬಿಟ್ಟಾನೆಯೇ ? ಬಿಡನು ಬಿಡನು. ಅವನೆಷ್ಟು ಕಠೋರನೋ ನಾನೂ ಅಷ್ಟೇ ಕಠೋರಳು. ಅವನನ್ನು ನಾನೂ ಬಿಡೆನು ಎನ್ನುತ್ತಾಳೆ. ಜಾಗ್ರತ್ ಸ್ವಪ್ನ ಸುಷುಪ್ತ ಅವಸ್ಥೆಗಳಲ್ಲೂ ಆತನನ್ನೇ ನೆನೆಯುವ ನನ್ನ ಮೇಲೆಯೇ ಏಕೆ ಈ ಹಟ ? ಅವನು ಒಲಿಯಲಿ, ಬಿಡಲಿ, ನೋಡಲಿ, ನೋಡದಿರಲಿ ಅದಾವುದೂ ನನಗೆ ಪ್ರಮುಖ ಅಲ್ಲ. ಅವನು ನನ್ನ ಮೊರೆಯನ್ನು ಆಲಿಸಲಿ, ಆಲಿಸದೇ ಇರಲಿ ನಾನು ಅವನ ಸ್ತುತಿಯನ್ನು ಮಾಡದೇ ಇರೆನು. ಅದು ಎನಗೆ ವಿಧಿಯೆಂದು ತಿಳಿದುಕೊಳ್ಳುವೆ ಎನ್ನುವ ಅಕ್ಕನ ನಿಲುವಿನಲ್ಲಿ ವಿಧಿಸಂಬಂಧವಾಗಿಯೂ ಅಲೌಕಿಕದ ಸಿಂಚನವಿದೆ. ಒಲ್ಲದವನನ್ನು ಒಲಿಸುವುದು ಆಕೆಗೆ ವಿಧಿ. ಈ ಅಪರೂಪದ ವಿಧಿಯನ್ನು, ಹಣೆಯ ಲಿಖಿತವನ್ನು ಸದ್ಭಕ್ತರ ಶ್ರೀಚರಣಕ್ಕೆ ಎರಗುವ ಮೂಲಕ, ಕಾಣುವ ಮೂಲಕ, ಕಳೆದುಕೊಂಡಾಕೆ ಎಂದು ಅಭಿಮಾನ ಪಡುತ್ತಾಳೆ. ಅಷ್ಟೇ ಅಲ್ಲ ಅಂಗದ ಭಂಗವನ್ನು ಲಿಂಗದಿಂದ, ಮನದ ಭಂಗವನ್ನು ಅರಿವಿನಿಂದ, ಜೀವದ ಭಂಗವನ್ನು ಶಿವಾನುಭವದಿಂದ, ಇಂದ್ರಿಯಗಳ ಕತ್ತಲೆಯನ್ನು

ಬೆಳಗನುಡುವ ಮೂಲಕ ಗೆದ್ದಿರುವೆ ಎನ್ನುತ್ತಾಳೆ. ಹೊರಗಣ್ಣಿಗೆ ತೋರುವುದು ಕೇವಲ ಜವ್ವನದ ಹೊರಮಿಂಚು. ಆದರೆ ಅದು ಕಾಮನ ಸುಟ್ಟುರುಹಿದ ಭಸ್ಮ. ಇಷ್ಟಾದ ಮೇಲೂ ಮನಸಿಜಳಾಗಿರುವಂತೆ ಚೆನ್ನಮಲ್ಲಿಕಾರ್ಜುನ ಪ್ರಚೋದಿಸಲು ಪ್ರಯತ್ನಿಸಿದರೆ ಆ ಮನಸಿಜನ ತಲೆಬರಹವನ್ನೇ ತೊಡೆದು ಹಾಕುವೆನೆಂದು ಶಪಥ ಮಾಡಿದ್ದಾಳೆ. ಇಂಥ ಛಲವೇ ನಿಜವಾದ ಶರಣತ್ವ

ಅಕ್ಕಮಹಾದೇವಿಯನ್ನು ಕುರಿತ ಯಾವ ಲೇಖನವನ್ನು ನೋಡಿದರೂ ಹೆಣ್ಣಿನ ಸ್ವಾತಂತ್ರ್ಯ ಸಾಧನೆಯ ಮಹಾಪ್ರಕರಣ ಎನ್ನುವ ಲೇಖಕಿಯರ ಹೇಳಿಕೆಯ ವಿಭಿನ್ನ ಆವೃತ್ತಿಗಳೇ ಎದ್ದು ಕಾಣಿಸುತ್ತವೆ. ಈ ಮಹಾಪ್ರಕರಣದ ಒಳಗಿನ ಸಂಘರ್ಷ, ದ್ವಂದ್ವಗಳನ್ನು ಪರಿಶೀಲಿಸುವ ಗೋಜಿಗೇ ಅವು ಹೋಗುವುದಿಲ್ಲ. ವ್ಯಕ್ತಿ ಪೂಜೆಯ ಪರಾಕಾಷ್ಠೆಯ ಸ್ಥಿತಿ ಈ ಲೇಖನಗಳ ಮೂಲ ಗುಣ. ಅಕ್ಕಮಹಾದೇವಿಯ ಭಕ್ತಿ ಮತ್ತು ಪ್ರೀತಿಯನ್ನು ಅಖಂಡವಾಗಿ ನೋಡುವುದರಲ್ಲಿಯೇ ಈ ಲೇಖಕಿಯರಿಗೆ ಆಸಕ್ತಿಯಿದೆ. 'ದೇಹ'ವೆನ್ನುವುದು ಅವಳನ್ನು ಮತ್ತೆ ಮತ್ತೆ ಕಾಡಿದರೂ ಕೊನೆಗೂ ದೇಹದ ಹಂಗಿನಿಂದ ಆಕೆ ಪಾರಾಗಿ ಆಧ್ಯಾತ್ಮದ ದಾರಿಯಲ್ಲಿ ದೃಢವಾಗಿ ನಡೆದಳು. ಭಕ್ತಿ ಮತ್ತು ಪ್ರೀತಿ ಎರಡಿಲ್ಲದಂತೆ ಒಂದಾದುದೇ ಅವಳ ಸಾಧನೆ. ಅಂದರೆ ಭಕ್ತಿಯ ಆಧ್ಯಾತ್ಮದ ಆವರಣದೊಳಗೇ ಅಕ್ಕಮಹದೇವಿಯ ಇಡೀ ಬದುಕನ್ನು ನೋಡಲಾಗುತ್ತದೆ. ಭವಿಯಾಗಿ ಆಕೆ ಎದುರಿಸಿದ ಸಮಸ್ಯೆ – ತಲ್ಲಣಗಳನ್ನು ಭವಿಯಾಗಿಯೇ ಆಕೆ ಪರಿಹರಿಸಿಕೊಳ್ಳಲು ನಡೆಸಿರಬಹುದಾದ ಹೋರಾಟಗಳನ್ನು ಕುರಿತು ಈ ಮಾದರಿ ದಿವ್ಯ ಮೌನ ತಾಳುತ್ತದೆ. ವಚನಕಾರರ ಜೊತೆಯಲ್ಲಿದ್ದೂ, ಅವರಿಗಿಂತಲೂ ಅಕ್ಕ ಭಿನ್ನವಾಗಿರಬಹುದಾದ ಸಾಧ್ಯತೆಯನ್ನು ಹುಡುಕುವುದರಲ್ಲಿ ಈ ಅಧ್ಯಯನಗಳಿಗೆ ಆಸಕ್ತಿಯಿಲ್ಲ. ಇದೊಂದು ಕೊರತೆ ಎಂದಲ್ಲ.

ಆದರೆ ಇದು ಸಾಧ್ಯವಾಗದೇ ಹೋದದ್ದರ ಹಿಮದಿನ ಕಾರಣಗಳನ್ನು ಗುರುತಿಸುವುದರಲ್ಲಿ ಮಾತ್ರ ನನಗೆ ಖಂಡಿತವಾಗಿಯೂ ಆಸಕ್ತಿಯಿದೆ. ನಮ್ಮ ಪರಂಪರೆಯ ರೋಮಾಂಚನಕಾರಿ ವ್ಯಕ್ತಿತ್ವವೊಂದನ್ನು ಕಟ್ಟಿಕೊಳ್ಳುವ ವಿಧಾನವನ್ನು ನಮ್ಮ ವರ್ತಮಾನ ಮತ್ತು ವ್ಯವಸ್ಥೆಗಳು ಒಟ್ಟಾಗಿ ನಿಯಂತ್ರಿಸುತ್ತವೆ. ಎನ್ನುವ ವಿವರ ಇಲ್ಲಿ ಮುಖ್ಯವಾಗಿ ಕಾಣಿಸುತ್ತದೆ. ಅಕ್ಕನನ್ನು ಸಮೃದ್ಧ ಪರಂಪರೆಯ ಭಾಗವಾಗಿ ನೋಡುವುದರಲ್ಲಿ ಈ ಮಾದರಿಯ ಅಧ್ಯಯನಗಳಿಗೆ ಇರುವ ಆಸಕ್ತಿ ಅವಳ ಇಡೀ ಬದುಕನ್ನು ವ್ಯಕ್ತಿಗತ ನೆಲೆಯಲ್ಲಿ ನೋಡುವುದರಲ್ಲಿ ಇಲ್ಲ. ಅಕ್ಕನ ಬದುಕೆಂಬುದು 'ಸ್ವಾತಂತ್ರ್ಯ ಸಾಧನೆಯ ಮಹಾಪ್ರಕರಣ' ಎಂದು ಮೆಚ್ಚಿ ಕೊಂಡಾಡುತ್ತಿರುವಾಗಲೂ ತಮ್ಮ ಲೇಖನಗಳ ವಿವರಗಳಲ್ಲಿ ಆಕೆ ಕೌಶಿಕನನ್ನು ತ್ಯಜಿಸಿದ್ದನ್ನಾಗಲೀ, ವ್ಯವಸ್ಥೆಯನ್ನು ಪ್ರಶ್ನಿಸಿದ್ದನ್ನಾಗಲೀ, ಆಯ್ಕೆಯ ಬದುಕು ಮತ್ತು ವ್ಯಕ್ತಿತ್ವದ ಸ್ವೀಕಾರಕ್ಕಾಗಿ ನಡೆಸಿದ ಹೋರಾಟವನ್ನಾಗಲೀ ಸಾಮಾಜಿಕ ಹಿನ್ನೆಲೆಯಲ್ಲಿ ಗಂಭೀರವಾಗಿ ಚರ್ಚಿಸುವ ಪ್ರಯತ್ನಗಳನ್ನು ಈ ಮಾದರಿ ಮಾಡುವುದಿಲ್ಲ. ಏಕೆಂದರೆ ಇದು ಮೇಲ್ನೋಟಕ್ಕೆ ಕಾಣಿಸುವಷ್ಟು ಸರಳವಾದುದಲ್ಲ. ಪ್ರತ್ಯಕ್ಷವಾಗಿ ಪರಂಪರೆಯ

ನಿರ್ಮಾಣದ ಕೆಲಸವನ್ನು ಮಾಡುತ್ತಲೇ ಪರೋಕ್ಷವಾಗಿ ಇನ್ನೊಂದು ನೆಲೆಯಲ್ಲಿ ಇವು ಕಾರ್ಯೋನ್ಮುಖವಾಗಿರುವಂತೆ ಭಾಸವಾಗುತ್ತದೆ. ಅಕ್ಕಮಹಾದೇವಿ ನಡೆಸಿದ ಪ್ರಯತ್ನಗಳನ್ನೆಲ್ಲಾ ಧಾರ್ಮಿಕ ಚೌಕಟ್ಟಿನೊಳಗೆ, ಭಕ್ತಿ ಪರಂಪರೆಯೊಳಗೆ ಕೂರಿಸುವ ಪ್ರಯತ್ನವನ್ನು ಇವು ಶ್ರದ್ಧೆಯಿಂದ ಮಾಡುತ್ತವೆ. ಆಕೆ ಎತ್ತುವ ಪ್ರಶ್ನೆಗಳನ್ನು ಶುದ್ಧ ವೈಚಾರಿಕ, ಸಾಮಾಜಿಕ ಪ್ರಶ್ನೆಗಳಾಗಿ ಚರ್ಚಿಸಲು ಇವು ಹಿಂಜರಿಯುತ್ತವೆ. ಆಕೆಯ ಬೆತ್ತಲೆಯ ವಿಷಯವನ್ನೇ ನೋಡೋಣ.

ಅಕ್ಕಮಹಾದೇವಿಯ ಬೆತ್ತಲೆಯನ್ನು ಭಕ್ತಿಯ ಪರಾಕಾಷ್ಠೆಯ ಅಮಗವಾಗಿ ದೇಹದ ಹಂಗನ್ನು ಮೀರುವ ಪ್ರಯತ್ನವಾಗಿ ಈ ಅಧ್ಯಯನಕಾರರು ಒಪ್ಪಿಕೊಳ್ಳಬಲ್ಲರೇ ಹೊರತು ತೀವ್ರವಾದ ಪ್ರತಿಭಟನೆಯ ಅಂಗವಾಗಿ ಅದನ್ನು ನೋಡಲಾರರು. ಆದ್ದರಿಂದಲೇ ಲೈಂಗಿಕತೆಯ ಅಕ್ಕನ ವಚನಗಳನ್ನು ದುರ್ಲಕ್ಷಿಸಿ ಅವರು ದೇಹವನ್ನು ನಿರಾಕರಿಸುವ ವಚನಗಳನ್ನು ಮಾತ್ರ ವೈಭವೀಕರಿಸುತ್ತಾರೆ. ಜೊತೆಗೆ ಅವಳನ್ನು ವಚನ ಚಳುವಳಿಯ ಸಮಷ್ಠಿಯಲ್ಲಿ ನೋಡುವುದರ ಮೂಲಕವೂ ಅವರು ಅನೇಕ ಪ್ರಶ್ನೆಗಳಿಂದ ಸುರಕ್ಷಿತವಾಗಿ ಪಾರಾಗಿ ಬಿಡುತ್ತಾರೆ. ಈ ಅಂಶವು ಅನಿವಾರ್ಯವಾಗಿ ಸ್ತ್ರೀವಾದಿ ಚಳುವಳಿಗೆ ತಳುಕು ಹಾಕಿಕೊಳ್ಳುತ್ತದೆ. ಹೆಣ್ಣೊಬ್ಬಳು ವ್ಯವಸ್ಥೆಯನ್ನು ಪ್ರಶ್ನಿಸುವ, ಬದಲಾಯಿಸುವ ಮಹತ್ವಾಕಾಂಕ್ಷೆಯಿಂದಲೋ, ವೈಯಕ್ತಿಕ ತುರ್ತಿನಿಂದಲೋ ನಡೆಸಿದ ಹೋರಾಟವನ್ನು, ಕಾಲದ ಅಂತರದಲ್ಲಿ ಮತ್ತೆ ವ್ಯವಸ್ಥೆ ಎಷ್ಟು ಶಕ್ತವಾಗಿ ವ್ಯವಸ್ಥೆಯ ಚೌಕಟ್ಟಿನೊಳಗೆ ಅಳವಡಿಸಲು ಪ್ರಯತ್ನಿಸುತ್ತದೆ ಎನ್ನುವ ಸಂಗತಿಯಂತೂ ನನ್ನನ್ನು ಮತ್ತೆ - ಮತ್ತೆ ಕಾಡುತ್ತದೆ. ಪರಂಪರೆ ನಿರ್ಮಾಣದ ಆ ಇಡೀ ಸನ್ನಿವೇಶದಲ್ಲಿ ಅಕ್ಕ ಮಹಾದೇವಿಯಂತಹ ಸಂಕ್ರಮಣ ಘಟ್ಟವೊಂದರ ಪ್ರತಿನಿಧಿಯ ವ್ಯಕ್ತಿತ್ವವನ್ನು ಅದರೆಲ್ಲಾ ಸಮೃದ್ಧತೆ, ಶಕ್ತಿ, ಸೌಂದರ್ಯ, ಸಂಕೀರ್ಣತೆ, ದ್ವಂದ್ವ, ನಿರ್ಭೀತಿ, ಪ್ರಾಮಾಣಿಕತೆ ಈ ಎಲ್ಲಾ ಬಹುಮುಖಿ ಆಯಾಮಗಳನ್ನು ಅವುಗಳ ಸಾಂದ್ರತೆ ಮತ್ತು ತೀವ್ರತೆಯಲ್ಲಿ ಗುರುತಿಸುವುದಿಲ್ಲ. ಬದಲಿಗೆ ಸರಳ ಭಕ್ತಿ ಚಳುವಳಿಯ ಆಯಾಮವೊಂದರಲ್ಲೇ ಸ್ಥಾಪಿಸಲು ನಡೆಸಿದ ಪ್ರಜ್ಞಾ ಪೂರ್ವಕ ಮತ್ತು ಅಪ್ರಜ್ಞಾಪೂರ್ವಕ ಪ್ರಯತ್ನವಾಗಿಯೇ ಮೊದಲ ಮಾದರಿಯ ಬಹುಪಾಲು ಲೇಖನಗಳು ಕಾಣಿಸುತ್ತವೆ. ವ್ಯಕ್ತಿತ್ವವೊಂದರ ಪರಿಣಾಮಕಾರೀ ಲಯಗಳ ವೈವಿಧ್ಯವನ್ನು, ಅದರ ಹೊಸತನವನ್ನು ಮೆಟ್ಟಿಕೊಳ್ಳುತ್ತಲೇ ಅದನ್ನು ವ್ಯವಸ್ಥೆಯ ಎಲ್ಲೆಯೊಳಗೆ ತರುವ ಯತ್ನಗಳು ಕಾಲದ ಅಂತರದಲ್ಲಿ ಸ್ಪಷ್ಟವಾಗಿ ಗೋಚರಿಸುತ್ತವೆ.

ಲೇಖನಗಳ ಯಶಸ್ಸನ್ನಾಗಲೀ, ಅರ್ಥಪೂರ್ಣತೆಯನ್ನಾಗಲೀ ನಾನು ನಿರಾಕರಿಸುತ್ತಿಲ್ಲ. ಪ್ರಭಾವಶಾಲಿ ವ್ಯಕ್ತಿತ್ವವೊಂದರ ಗ್ರಹಿಕೆಯ ವಿಧಾನಗಳನ್ನು ನಿರ್ಬಂಧಿಸುವ, ರೂಪಿಸುವ ಸಾಮಾಜಿಕ - ಸಾಂಸ್ಕೃತಿಕ ಯಜಮಾನ್ಯ ಶಕ್ತಿಗಳನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸುತ್ತಿದ್ದೇನೆ. ಆ ಗಳಿಕೆಯ ಅಗತ್ಯವನ್ನು ಪೂರೈಸಿದವು ಎನ್ನುವ ಸರಳ ಸತ್ವದಾಚೆಗಿನ ವಿವರಗಳನ್ನು ಗುರುತಿಸುವ ಸ್ಥೂಲವಾದ ಇದು, ಅಕ್ಕನ ಬದುಕನ್ನು ವೈಯಕ್ತಿಕ ನೆಲೆಯಿಂದ ನೋಡುವ ಮೊದಲ ಯತ್ನವಿದು ಹೋರಾಟವೇ ಅಕ್ಕನ ಬದುಕಿನ ಮೂಲ ದ್ರವ್ಯ ಎನ್ನುವ ನಿಲುವು ಈ

ಬರಹಗಳಲ್ಲಿ ಪ್ರಧಾನವಾಗಿ ಕಾಣಿಸುತ್ತದೆ. ಆಕೆಯ ಸಂಕೀರ್ಣತೆ ಮತ್ತು ದ್ವಂದ್ವವನ್ನು ಪ್ರಧಾನವಾಗಿಟ್ಟುಕೊಂಡು ಅವಳ ವ್ಯಕ್ತಿತ್ವವನ್ನು ಕಟ್ಟಲು ಈ ಬರಹಗಳು ಉದ್ದೇಶಿಸಿವೆ. ಭಿನ್ನಸ್ವರದ ರೀತಿಯ ಲೇಖನಗಳು ಆಕೆಯ ತಾತ್ವಿಕತೆಯನ್ನು ಅರ್ಥಮಾಡಿಕೊಳ್ಳುವ ನೆಲೆಯದ್ದಾದರೆ, ದೇಹವನ್ನು ನಿರಾಕರಿಸುತ್ತಲೇ ಅಕ್ಕಮಹಾದೇವಿ ಅದು ಮನುಷ್ಯ ಜೀವನದ ಸಂಭ್ರಮದ ಮೂಲ ಆಕರಗಳಲ್ಲಿ ಒಂದು ಎಂಬುದನ್ನು ತನ್ನ ವಚನಗಳಲ್ಲಿ ಉತ್ಕಟವಾಗಿ ಪ್ರತಿಪಾದಿಸುತ್ತಾಳೆ ಎನ್ನುವ ಅಂಶಕ್ಕೆ ಹೆಚ್ಚಿನ ಒತ್ತನ್ನು ಕೊಡುತ್ತದೆ. ಅವಳ ಹೋರಾಟ ಸ್ವಭಾವವನ್ನು, ದೇಹ ಕಾಮದ ಮೋಹವನ್ನು ಗುರುತಿಸುತ್ತಿರುವಾಗ ಅವಳ ವಚನಗಳಲ್ಲಿ ಅಷ್ಟೇ ಮುಖ್ಯವಾಗಿರುವ ಪ್ರೀತಿಯ ಅಲೌಕಿಕತೆ, ಮಾರ್ದವತೆ, ಅದು ಬದುಕಿಗೆ ತಂದುಕೊಡಬಹುದಾದ ಸಾರ್ಥಕತೆ, ಭಕ್ತಿಯ ಘನತೆ ಇವುಗಳನ್ನು ನಿರ್ಲಕ್ಷಿಸುತ್ತದೆ.

ಅಕ್ಕಮಹಾದೇವಿಯನ್ನು ಅಭಿಮಾನಕ್ಕೆ ಪಾತ್ರವಾಗಿಸಿ, ಮತ್ತೆ ಮತ್ತೆ ಚರ್ಚಿಸಿದರೂ ಕೂಡಾ ಅವಳನ್ನು ಮುಟ್ಟಬೇಕಾದ ಮುಟ್ಟಬಹುದಾದ ದಾರಿಗಳು ಇನ್ನೂ ಉಳಿದವೆ. ಎಂದೇ ನನಗನ್ನಿಸುತ್ತದೆ. ಇದನ್ನು ಹೀಗೂ ಹೇಳಬಹುದು. ಎಲ್ಲಾ ಉಜ್ವಲ, ರೋಮಾಂಚನಕಾರಿ ವ್ಯಕ್ತಿತ್ವಗಳಲ್ಲೂ ಕೆಲವು ವಿಶಿಷ್ಟ ಗುಣವಿರುತ್ತವೆ. ಬದಲಾದ ಕಾಲ, ಸಂದರ್ಭದ ಹಿನ್ನೆಲೆಯಲ್ಲಿ ಆ ವ್ಯಕ್ತಿತ್ವಗಳನ್ನು ಗ್ರಹಿಸುವ ವಿಧಾನಗಳು ಮಾತ್ರ ನಿರಂತರವಾಗಿ ಶೋಧಿತವಾಗಿರುತ್ತಿರುತ್ತವೆ. ನನ್ನ ಮಟ್ಟಿಗೆ ಅಕ್ಕಮಹಾದೇವಿ ಆದಿಮ ಸ್ತ್ರೀವಾದದ ಪ್ರತೀಕ ; ಆದಿಮ ಸ್ತ್ರೀವಾದದ ಅತಿರೇಕದ ದೌರ್ಬಲ್ಯ ಶಕ್ತಿ, ಎಲ್ಲದರ ರೂಪಕ, ಅವಳನ್ನು ಒಂದು ಅಸಮಾನ್ಯ ಜನಪರ ಚಳುವಳಿಯ ಪ್ರದರ್ಶಕ ಸಾಧಕಿಯಾಗಿ ಮಾತ್ರ ನೋಡುವುದಾಗಲೀ, ವೈಯಕ್ತಿಕ ತುರ್ತಿನಿಂದ ನಡೆಸಿದ ಪ್ರಯತ್ನ ಎಂದು ಮಾತ್ರ ನೋಡುವುದಾಗಲೀ ಆಕೆಯ ವ್ಯಕ್ತಿತ್ವನ್ನು ಪಾರ್ಶ್ವಿಕವಾಗಿ ತೋರಿಸುತ್ತವೆ.

ಎಸ್. ಗಾಯತ್ರಿಯವರು ಹೇಳುವಂತೆ ಅಕ್ಕ ಕೂಡ ವೈಯಕ್ತಿಕ ನೆಲೆಯಲ್ಲಿ ಸಾಮಾಜಿಕವಾದ ಪ್ರತಿಭಟನೆಯನ್ನು ಮಾಡುತ್ತಾಳೆ. ಆಕೆ ಬಹುಪತ್ನಿತ್ವವನ್ನು ಉಗ್ರವಾಗಿ ಸುತ್ತಾಳೆ. ಹಿರಿಯತನಕ್ಕೆ ಬಿದ್ದರೆ ಬಾಣನ ಮನೆಯ ಬಾಗಿಲು ಕಾಯುವವರು, ಅಂತ ಹೇಳಿ ಶಿವ ಹಾಗೂ ಬಸವಣ್ಣನನ್ನು ಒಟ್ಟಿಗೆ ವಿಮರ್ಶೆ ಮಾಡುತ್ತಾಳೆ. ಯಾವುದೇ ಚಳುವಳಿಯಲ್ಲಿ ಮುಖ್ಯವಾದ ರಾಜಕೀಯ, ಸಾಮಾಜಿಕ ಪ್ರಶ್ನೆಗಳನ್ನು ಮುಂಚೂಣಿಗೆ ಬಂದಾಗ, ಲಿಂಗ ಸಂಬಂಧಿ ಆದಂಥ ಚಿಂತನೆಗಳು ಹಿನ್ನೆಲೆಗೆ ಹೋಗುವ ಪ್ರಸ್ತಾಪವನ್ನು ನಮ್ಮ ಲೇಖಕಿಯರು ಮಾಡಿದರು.

ಅದು ಶರಣ ಚಳುವಳಿ ಇರಬಹುದು, ಸ್ವಾತಂತ್ರ್ಯ ಚಳುವಳಿ ಇರಬಹುದು, ಬಂಡಾಯ ಚಳುವಳಿ ಇರಬಹುದು. ಈ ಮಾದರಿಯ ಜನಪರ ಚಳುವಳಿಗಳಲ್ಲಿರೋ ವೈಚಾರಿಕ ಸಾಂಸ್ಕೃತಿಕ ಮಾದರಿಗಳು ಈಗ ಹೇಗೆ ಪ್ರಸ್ತುತ ಆಗುತ್ತವೆ ಅನ್ನೋದು, ರಾಷ್ಟ್ರೀಯವಾದಿ ಚಳುವಳಿ ಶುರುವಾದಾಗ, ಮಹಿಳೆಯರಿಗೆ ಶಿಕ್ಷಣ ಕೊಡಬೇಕು, ವಿಧವಾ ವಿವಾಹ ಬೆಂಬಲಿಸಬೇಕು ಅನ್ನೋ ಒಂದು ಪ್ರಸ್ಥಾನ. ೧೮ನೇ ಶತಮಾನದಿಂದ ಏನು ಸಾಮಾಜಿಕ ಸುಧಾರಣೆ ಹೆಸರಲ್ಲಿ ಶುರುವಾಗಿತ್ತೋ ಅದು ಹೆಚ್ಚೂ ಕಡಿಮೆ ನಿಂತೇ ಹೋಯ್ತು. ವಸಾಹತುಶಾಹಿಯ ಆಕ್ರಮಣ

ಕಾಲದಲ್ಲಿ ನಮಗಲ್ಲೆ ನಾವೇ ವಿಮರ್ಶೆ ಮಾಡ್ಕೋಬಾರದು. ಕೆಲವು ಪ್ರಶ್ನೆಗಳನ್ನು ಆಮೇಲೆ ಬಗೆಹರಿಸೋಣ ಅನ್ನೋ ಧೋರಣೆ ಬಂತು. ಸಾಮಾನ್ಯವಾಗಿ ಸಾಂಸ್ಕೃತಿಕ ಚಳುವಳಿಗಳು ತಮ್ಮ ವೈಚಾರಿಕತೆ ಕಟ್ಟಿಕೊಳ್ಳುವಾಗ ಎಲ್ಲೋ ಒಂದ್ಕಡೆಗೆ ಸ್ತ್ರೀ ವ್ಯಕ್ತಿತ್ವದ ಪುನಾರಚನೆಯನ್ನೇ ಪ್ರಧಾನವಾಗಿ ಇಟ್ಟಿರುತ್ತವೆ. ಸ್ವತಃ ಹಿಂದುತ್ವವಾದಿ ಪ್ರಸ್ಥಾನ ಕೂಡ ಒಂದು ಸ್ತ್ರೀತ್ವದ ಕಲ್ಪನೆಯನ್ನು ಮುಂದಿಡುತ್ತಾ ಇದೆ. ಕೆಲವು ವಚನಕಾರ್ತಿಯರಲ್ಲಿ ಜಂಗಮರ ಡಾಂಭಿಕತೆಯ ಬಗ್ಗೆ ಕಟುವಾಗಿ ವಿಮರ್ಶೆ ಇದೆ. ಚಳುವಳಿ ನಡಿತಾ ಇರುವಾಗಲೇನೆ ಅದರ ಮಿತಿ ತೋರಿಸುವಂಥ ಆರೋಗ್ಯಕರ ಕೆಲಸ ನಡೀತು ಅನ್ನೋದನ್ನ ಇದು ಸೂಚಿಸುತ್ತೆ. ಆದರೆ ಇವರು ಈ ಪ್ರಶ್ನೆಯನ್ನ ಲಿಂಗ ನಿರ್ದಿಷ್ಟವಾಗಿ ಎತ್ತಲ್ಲ. ಅಕ್ಕ ಲಿಂಗ ನಿರ್ದಿಷ್ಟವಾದ ಅನುಭವಗಳ ಮೂಲಕಾನೆ ಪ್ರಶ್ನೆಗಳನ್ನು ಎತ್ತುತ್ತಾಳೆ. ಆದರೂ ಅವನ್ನು ಸಾಮುದಾಯಕ ರೀತಿಯಲ್ಲಿ ಎತ್ತೋಲ್ಲ ಮತ್ತು ಪುರುಷ ಕಥನಗಳ ಮೂಲಕ ಮಾತನಾಡುತ್ತಾಳೆ ಅನ್ನೋ ಅನುಮಾನಗಳೂ ಇವೆ.

ಟಿ.ಎಂ. ಉಷಾರಾಣಿರವರ ಅಧ್ಯಯನದಂತೆ ಅಕ್ಕನ ಸಲುವಾಗಿ ಅನೇಕ ಅಧ್ಯಯನಗಳು ನಡೆದಿರುವುದನ್ನು ಗಮನಿಸಬಹುದು. ಆದರೆ ಸಮಸ್ತ ವಚನಕಾರರನ್ನು ಯಾವುದಾದರೂ ತಾತ್ವಿಕವಾದ ಸಿದ್ಧ ಅಚ್ಚಿಕೊಳಗೆ ಎರಕ ಹೊಯ್ಯುವ ಅಧ್ಯಯನಗಳು ಇವೆ. ಅವಕ್ಕೆ ಅಕ್ಕ ಸುಲಭವಾಗಿ ದಕ್ಕುವುದಿಲ್ಲ. ಆದರೂ ಅವಳನ್ನು ತಮಗೆ ಬೇಕಾದ ಹಾಗೆ ಆವಾಹಿಸಿಕೊಳ್ಳಲು ಅಧ್ಯಯನಗಳು ನಿರಂತರವಾಗಿ ಪ್ರಯತ್ನ ಮಾಡುತ್ತಲೇ ಇವೆ. ಕನ್ನಡ ಸಾಹಿತ್ಯದಲ್ಲಿ ಶರಣರ ಚರಿತ್ರೆಯನ್ನು ಮರು ರೂಪಿಸುವಾಗ, ಅಕ್ಕನನ್ನು ಅನುಸಂಧಾನ ಮಾಡಿರುವ ಹಲವಾರು ಮಾದರಿಗಳು ಸಿಗುತ್ತವೆ. ಆಧುನಿಕ ಸಾಹಿತ್ಯದಲ್ಲಿ ಕವನ, ಕಾದಂಬರಿ, ನಾಟಕ ಮುಂತಾದ ಪ್ರಕಾರಗಳು ಕಟ್ಟಿಕೊಡುವ ಚಿತ್ರಗಳು, ರಗಳೆ, ಶೂನ್ಯಸಂಪಾದನೆ ಮುಂತಾದ ಪಠ್ಯಗಳನ್ನು ಆಧರಿಸಿ ಬಂದಿರುವ ಅಧ್ಯಯನಗಳು ಅಕ್ಕನ ಹಾಗೂ ಅವರ ಸಮಕಾಲೀನ ವಚನಕಾರರ ವಚನಗಳ ಮೂಲಕ ಹುಟ್ಟಿರುವ ಅಧ್ಯಯನಗಳು, ಅಕ್ಕನನ್ನು ತಾತ್ವಿಕ ಬೌದ್ಧಿಕ ಅಧ್ಯಯನಕ್ಕೆ ಒಳಪಡಿಸುವ ವಿಧಾನಕ್ಕೂ, ಸೃಜನಶೀಲ ಪ್ರಕ್ರಿಯೆಯಲ್ಲಿ ಅಕ್ಕನ ಜತೆ ಸಂವಾದ ಸೃಷ್ಟಿಸಿಕೊಳ್ಳುವುದಕ್ಕೂ ಮೂಲಭೂತ ವ್ಯತ್ಯಾಸಗಳಿವೆ. ಅಕ್ಕನ ಜೀವನ ಚರಿತ್ರೆಯನ್ನು ಕಟ್ಟಿಕೊಡುವ ವಿಧಾನಕ್ಕೆ ಹೆಚ್ಚು ಲೇಖಕಿಯರು ಅಂಟಿಕೊಂಡಿದ್ದಾರೆ. ಆಕೆಯ ಜೀವನವನ್ನು ಬದಿಗಿಟ್ಟು ವಚನಗಳೊಂದಿಗೆ ತೀವ್ರವಾದ ಸಂವಾದವನ್ನು ಏರ್ಪಡಿಸಿಕೊಂಡವರೂ ಇದ್ದಾರೆ.

ಸೃಜನಶೀಲ ಪ್ರಕ್ರಿಯೆಯಲ್ಲಿ ಅನುಸಂಧಾನ ಮಾಡುವವರು ಇದ್ದಾರೆ. ಆದರೆ ಹೆಚ್ಚಿನ ಕಡೆ ಅಕ್ಕನ ವ್ಯಕ್ತಿತ್ವ ಸಮಸ್ಯೀಕರಣಗೊಳ್ಳದೆ ಆಕೆ ವಿರಾಗಿಣಿಯಾದ ಭಕ್ತಳೂ ಆದ ಉದಾತ್ತ ವ್ಯಕ್ತಿತ್ವವಾಗಿ ಚಿತ್ರಣಗೊಂಡಿದ್ದಾಳೆ.

ಅಕ್ಕನ ವಚನಗಳನ್ನು ಬಲವಂತವಾಗಿ ಈ ಚೌಕಟ್ಟುಗಳಲ್ಲಿ ತೋರಿಸಲಾಗಿದೆ. ಸಿದ್ಧ ಮಾದರಿಗಳನ್ನು ರೂಪಿಸಿಕೊಂಡು ಅವುಗಳಿಗೆ ತಕ್ಕಂತೆ ವಚನಗಳನ್ನು ವಿಶ್ಲೇಷಿಸಿಕೊಳ್ಳುವ ಈ ಮಾದರಿ ಮುಂದಿನ ನಮ್ಮ ಲೇಖಕಿಯರಿಗೂ ಹೆದ್ದಾರಿಯಾಗಿ ಪರಿಣಮಿಸಿತು.

ಲಿಂಗಾಯತ ವಿದ್ವಾಂಸರು ಸಾಮಾನ್ಯವಾಗಿ ಆರಾಧಕ ಮನೋಭಾವ ಇಲ್ಲವೆ ಪ್ರವಚನ ರೀತಿಯಲ್ಲಿ ಅಕ್ಕನನ್ನು ಬಳಸಿಕೊಳ್ಳುತ್ತಾರೆ. 'ನಂದಾದೀಪ', 'ಜ್ಞಾನನಿಧಿ', 'ವೈರಾಗ್ಯಮೂರ್ತಿ', 'ಮಹಾಯೋಗಿನಿ' ಅಕ್ಕನ ಆಲೋಚನಾಮೃತ ಮುಂತಾದ ವಿಶೇಷಣಗಳು ಅವರ ವಿಶ್ಲೇಷಣೆಗಳ ತಾತ್ವಿಕ ಸ್ವರೂಪವನ್ನು ಸೂಚಿಸುತ್ತವೆ. ಅಕಾಡೆಮಿಕ್ ಅಧ್ಯಯನಗಳಲ್ಲೂ ಕೆಲವರು ವೀರಶೈವ ಧರ್ಮದ ವಕ್ತಾರರಾಗಿ ವಚನಕಾರರನ್ನು ನೋಡುತ್ತಾರೆ. ಇದರಿಂದ ಅಕ್ಕನ ತಾತ್ವಿಕ ನೆಲೆಗಳ ಶೋಧನೆ ಸ್ಥಗಿತವಾದಂತೆ ಭಾಸವಾಗುತ್ತದೆ.

ಕೆಲವು ಅಧ್ಯಯನಗಳಲ್ಲಿ ಸಂಬಂಧವಿರಲಿ ಬಿಡಲಿ ಅಕ್ಕನೊಂದಿಗೆ ಇತರ ಮಹಿಳಾ ಸಂತರು, ಉದಾ : ತಮಿಳಿನ ಕಾರಿಕಾಲಮ್ಮೆಯ ಜತೆ ತುಲನೆ ಮಾಡಿದ ಉದಾಹರಣೆಗಳಿವೆ. ಇಂತಹ ಯಾಂತ್ರಿಕ ವಿಧಾನಕ್ಕೆ ಹೊರತಾಗಿರುವ ತೌಲನಿಕ ಅಧ್ಯಯನಗಳೂ ಇವೆ. ಅವೆಂದರೆ ವಿನೋದಾ ಬಾಯಿ ಹಾಗೂ ರಾಮಾನುಜನ್ ಮಾಡಿರುವ ಅಧ್ಯಯನಗಳು. ಇವು ಕುತೂಹಲಕಾರಿಯಾಗಿವೆ.

ಹಿಂದಿನ ಅಧ್ಯಯನಗಳಲ್ಲಿ ಕೈಬಿಡಲಾಗಿದ್ದ ಅಕ್ಕನ ತತ್ವಗಳು ಅರ್ಥಪೂರ್ಣವಾದ ಚರ್ಚೆಗೆ ಒಳಗಾಗುವುದು ೮೦ ರ ದಶಕದಿಂದೀಚೆಗೆ ಸ್ತ್ರೀವಾದಿ ಚಿಂತಕಿಯರು ಅಕ್ಕನ ಜತೆ ವರ್ತಮಾನದ ತಲ್ಲಣಗಳನ್ನು ಸೇರಿಸಿ ವಚನಗಳನ್ನು ವಿಶ್ಲೇಷಿಸುವ ಕಾರ್ಯ ನಡೆಯಿತು. ಸಮಾನತೆ – ಸ್ವಾತಂತ್ರ್ಯ – ಸ್ವಾವಲಂಬನೆ – ಲಿಂಗಾಧಾರಿತ ತಾರತಮ್ಯಗಳ ಪ್ರಶ್ನೆಗಳನ್ನಿಟ್ಟುಕೊಂಡು ಹೋರಾಡುವ ಮಹಿಳಾ ಚಳುವಳಿಗೆ ಸೈದ್ಧಾಂತಿಕವಾಗಿ ಸಾಹಿತ್ಯ ಚರಿತ್ರೆಯನ್ನು ಅಳವಡಿಸಿಕೊಳ್ಳುವಾಗ ಅಕ್ಕ ಆಸರೆಯಾಗಿ ನಿಲ್ಲುತ್ತಾಳೆ. ಅಕ್ಕನಿಗೆ ಸಾಮಾಜಿಕ ಪರಿವರ್ತನೆಗಾಗಿ ಟೊಂಕಕಟ್ಟಿ ನಿಲ್ಲುವ ಧ್ಯೇಯವಿರಲಿಲ್ಲ. ಎಂಬುದು ಬೇರೆ ಮಾತು. ಆದರೆ ಆಕೆ ತನ್ನನ್ನು ಸುತ್ತುವರಿದ ಸಾಂಪ್ರದಾಯಿಕ ಚೌಕಟ್ಟುಗಳಿಂದ ಬಿಡುಗಡೆಗೊಳ್ಳಲು ಇರುವ ದಾರಿಗಳನ್ನು ಕಂಡುಕೊಳ್ಳುವ ಶೋಧಕಿಯಾಗಿದ್ದಾಳೆ. ಅಕ್ಕ ಸಾಮಾಜಿಕ ಯಜಮಾನಿಕೆಯನ್ನು ಎದುರು ಹಾಕಿಕೊಂಡು ಬಂಧನಗಳ ವೇಷ ಕಳಚಿ, ಬಿಡುಗಡೆಯನ್ನು ಆರಿಸಿ ಹೊರಡುವ ಸಂಗತಿ ಸಾಧಾರಣವಾದುದೇನೂ ಅಲ್ಲ. ಅಧ್ಯಯನಗಳಿಗೆ ಇದು ಕುತೂಹಲದ ಮತ್ತು ಸವಾಲಿನ ಸಂಗತಿ. ತೊಡಿಸಿದ ದಕ್ಕೈಕೋಳಗಳನ್ನು ಕಳಚಲು ಎಲ್ಲಿಂದಲೋ ಬರುವ ಶಕ್ತಿಗಳನ್ನು ಕಾಯದೇ ತಮ್ಮ ಶಕ್ತಿ – ಯುಕ್ತಿಯಿಂದ ಮುಕ್ತ ಪ್ರಪಂಚಕ್ಕೆ ಧುಮುಕಲು ಅಕ್ಕ ಮಾದರಿಯಾಗಿದ್ದಾಳೆ. ಇದು ಅವಳನ್ನು ಸ್ತ್ರೀ ವಿಮುಕ್ತಿಯ ಹರಿಕಾರಳನ್ನಾಗಿ ಮಾಡಿದೆ. ಈ ಹಿಂದೆ ತಿಳಿಸಿದಂತೆ ಅಕ್ಕನಿಗೆ ಸಮಾಜದಲ್ಲಿರುವವರ ಬಿಡುಗಡೆ ಆಕೆಗೆ ಮುಖ್ಯವಾಗಿರಲಿಲ್ಲ. ಅದರೆ ಪುರುಷರಿಂದ ವಿಮುಕ್ತಿ ಪಡೆಯಲು ಹಾತೊರೆಯುತ್ತಿರುವ ಸ್ತ್ರೀ ಸಂವೇದಕರಿಗೆ ಆಗಾಧವಾದ ಬಲ ತುಂಬುತ್ತಾಳೆ. ಇದಕ್ಕೆ ಈಗಲೂ ಅಕ್ಕನನ್ನು ಕುರಿತು ಹುಟ್ಟುತ್ತಿರುವ ಅಪಾರ ಕವನಗಳು ಮತ್ತು ಚಿಂತನ ಲೇಖನಗಳು ಸಾಕ್ಷಿಯಾಗಿವೆ. ಪ್ರಾತಿನಿಧಿಕ ಕೃತಿ ಮತ್ತು ಲೇಖನಗಳನ್ನು ಇಟ್ಟುಕೊಂಡು, ಇದುವರೆಗಿನ ಅಧ್ಯಯನಗಳಲ್ಲಿ ಅಂದಂದಿನ ಒತ್ತಡಗಳಿಗೆ ಮಣಿಯ, ಸೀಮಿತ ಚೌಕಟ್ಟಿನಲ್ಲಿ ಅಕ್ಕನನ್ನು

ಕಂಡಿರುವುದನ್ನು ನೋಡಬಹುದು. ಇದರೊಂದಿಗೆ ಅಕ್ಕನ ವಚನಗಳ ತಾತ್ವಿಕ ನೆಲೆಗಳನ್ನು ಸಮರ್ಥವಾಗಿ ನಿಭಾಯಿಸಿರುವುದನ್ನೂ ಗಮನಿಸಬಹುದು. ಅಕ್ಕ ಪುರುಷ ಪ್ರಧಾನ ವ್ಯವಸ್ಥೆಯ ಕ್ರಮಗಳನ್ನು ಧಿಕ್ಕರಿಸುತ್ತಲೇ ಆ ವ್ಯವಸ್ಥೆಗೆ ಶರಣಾಗುವ ಸಂಧಿಗ್ಧತೆಯನ್ನು ಕಾಣುತ್ತೇವೆ.

ಕೆ. ನೀಲಾ ಹೇಳುವಂತೆ – ತಮ್ಮ ಅಧ್ಯಯನದಲ್ಲಿ ನಿಜವಾದ ಶರಣರನ್ನು ಹುಡುಕಬೇಕಾದರೆ ಅವರ ವಚನಗಳನ್ನೇ ನೋಡಬೇಕು. ಅನ್ನೋ ಶರಣರ ಮಾತನ್ನ ನಾನು ಒಪ್ತೀನಿ. ಆದರೆ ಪ್ರಜಾಪ್ರಭುತ್ವವನ್ನ ಓಲೈಸಲಿಕ್ಕಾಗಿ, ಅಲ್ಲಮನನ್ನು ವೈಭವೀಕರಿಸಿ ಬಸವಣ್ಣನನ್ನ ಗೌಣ ಮಾಡಲಿಕ್ಕೆ ಶೂನ್ಯ ಸಂಪಾದನೆ ಬಂತು ಅನ್ನೋ ಮಾತನ್ನ ಒಪ್ಪೋದು ಕಷ್ಟ. ಹಾಗೆ ಮಾಡಬೇಕು ಅಂತಿದ್ದರೆ ಶೂನ್ಯ ಸಂಪಾದನೆಕಾರ ಇನ್ನಷ್ಟು ಕತೆಗಳನ್ನು ಹೆಣೀಬಹುದಾಗಿತ್ತು. ಒಟ್ಟಾರೆಯಾಗಿ ಶೂನ್ಯಸಂಪಾದನೆಯಲ್ಲಿ ಪುರುಷ ಪ್ರಧಾನವಾದ ಮನಸ್ಸುಗಳು ಕೆಲಸ ಮಾಡಿದಾವೆ. ಅಂತ ನನಗನಿಸುತ್ತದೆ. ಯಾಕೆಂದರೆ ಅಕ್ಕನನ್ನು ಅಲ್ಲಮ ಮಾತ್ರ ಪ್ರಶ್ನೆ ಮಾಡ್ತಾನೆ.

ಅಕ್ಕನ ಸುಮಾರು ೪೦೦ ವಚನಗಳಲ್ಲಿ ೨೦ ರಷ್ಟರಲ್ಲಿ ಆಕೆ ಗಂಡಾಗುವ ಪರಿಭಾಷೆ ಬಳಸ್ತಾಳೆ. ಅವು ಪುರುಷ ಪ್ರಧಾನವಾದ ನುಡಿಗಟ್ಟಿನಲ್ಲಿ ಇವೆ ಅಂತ ಮೇಲ್ನೋಟಕ್ಕೆ ತೋರುತ್ತವೆ. ಆದರೆ ಅಕ್ಕ ಅವನ್ನು ತನಗೆ ಬೇಕಾದ ಹಾಗೆ ರೂಪಾಂತರ ಮಾಡಿಕೊಳ್ಳುತ್ತಾರೆ.

ಸಾಮುದಾಯಿಕವಾದ ಒಂದು ಚಳುವಳಿಯಲ್ಲಿ ವ್ಯಕ್ತಿ ವಿಶಿಷ್ಟವಾದ ಚಿಂತನೆಯನ್ನು ಅಭಿವ್ಯಕ್ತಿ ಮಾಡುತ್ತಾಳೆ. ೧೨ನೇ ಶತಮಾನದ ಚಳುವಳಿಯನ್ನು ನೋಡುವ ನಮ್ಮ ನೋಟ ಯಾವುದು ಅನ್ನೋದು ಇಲ್ಲಿನ ಪ್ರಶ್ನೆ ವಚನಕಾರರು ಎತ್ತಿದ ರಾಜಕೀಯ, ಸಾಮಾಜಿಕ ಪ್ರಶ್ನೆಗಳನ್ನು ನಾವು ಅದು ೨೦ನೇ ಶತಮಾನದ ನಮ್ಮ ರಚನೆ ಅನ್ನೋದು ಅಷ್ಟು ಸರಿಯಲ್ಲ. ಅವರು ಅನ್ನೋ ಚಾರಿತ್ರಿಕ ಸಂಗತಿಯನ್ನ ಮರೆಯೋಕೆ ಆಗಲ್ಲ. ಈ ಪ್ರತಿಭಟನೆಯನ್ನು ಮಾಡುವಾಗ ಅವರಿಗೆ ಅವರ ಕಾಲದ ಇತಿಮಿತಿಗಳಿದ್ದವು. ಪ್ರತಿಕಾಲದಲ್ಲೂ ಅನ್ಯಾಯಕ್ಕೆ ಒಳಗಾದವರು ತಮ್ಮದೆ ಆದ ಚರಿತ್ರೆಯನ್ನು ಪುನರಚಿಸಿಕೊಳ್ಳುತ್ತಾರೆ. ಆ ಕೆಲಸ ೨೦ನೇ ಶತಮಾನದಲ್ಲಿ ವಸಾಹತುಶಾಹಿ ಕಾಲಘಟ್ಟದಲ್ಲಿ ನಡೆದಿರಬಹುದು. ಆದರೆ ಅದನ್ನ ಮುಂದುವರೆದ ಬ್ರಾಹ್ಮಣರಿಗೆ ಸ್ಪರ್ಧಿಯಾಗಿ ಹುಟ್ಟಿದ ಬ್ರಾಹ್ಮಣೇತರ ರಚನೆ ಅಂದರೆ ಸರಳೀಕರಣ ಮಾಡಿದ ಹಾಗೆ ಆಗುತ್ತದೆ ಅಂತ ನನ್ನ ಅನುಮಾನ. ಬ್ರಾಹ್ಮಣರ ವಿರುದ್ಧದ ಚಳುವಳಿಯನ್ನು ಒಂದು ಅಂಶದಿಂದ ಚರ್ಚೆ ಮಾಡೋದು ಸರಳೀಕರಣವಾಗ್ತದೆ. ಹಾಗೆ ನೋಡಿದರೆ ಯಾವುದು ಬ್ರಾಹ್ಮಣ ? ಅದು ಬಂದಿಲ್ಲ. ನಾಮ ಹೇಗೆ ಹಾಕ್ಕೋಬೇಕು ಅನ್ನೋದರಿಂದ ಹಿಡಿದು ಅನೇಕ ಬೇಧಗಳಿವೆ ಚಾರಿತ್ರಿಕವಾಗಿ ನೋಡೋದಾದರೆ ವಚನ ಚಳುವಳಿ ಬ್ರಾಹ್ಮಣ ವಿರೋಧಿ ನಿಜ.

ಕವಯತ್ರಿ ಯಶೋಧಾರವರು ಹೇಳುವಂತೆ ಬ್ರಾಹ್ಮಣ ವಿರೋಧ ಅನ್ನುವುದಕ್ಕಿಂತ ವೈಚಾರಿಕವಾಗಿ ಪ್ರಶ್ನೆ ಎತ್ತಬೇಕು ಅನ್ನಿಸುತ್ತೆ. ಒಟ್ಟು ವಚನ ಚಳುವಳಿಯಲ್ಲಿ ಅಕ್ಕನ ಪಾತ್ರವನ್ನು ಅವಳು ಕೇವಲ ವೈಯಕ್ತಿಕವಾಗಿ ಇರುವಂತಹ ವಚನಗಳನ್ನೇ ನಾವು ಗಮನಿಸುತ್ತಾ ಇದ್ದಿರಬಹುದು ಅಕ್ಕನ ಚೆನ್ನಮಲ್ಲಿಕಾರ್ಜುನ ಒಬ್ಬ ದೇವರಲ್ಲ. ಒಬ್ಬ ಪುರುಷ, ಒಬ್ಬ ಮನುಷ್ಯ

ಅಂತ ನೋಡಿದರೆ ಹೇಗಿರುತ್ತೆ. ಅಕ್ಕ ದಾಂಪತ್ಯವನ್ನು ನಿರಾಕರಿಸಲಿಲ್ಲ. ಸ್ತ್ರೀ ಸ್ವಾತಂತ್ರ್ಯವಾದಿಯಲ್ಲ. ಅವಳೊಂದು ಮಾನಸಿಕವಾಗಿ ವಿಚಿತ್ರ ಸ್ಥಿತಿಯಲ್ಲಿ ಇದ್ದವಳು. ಕೃಷ್ಣನ ಪ್ರೇಯಸಿ ಅಂತ ಮೀರಾ ಇದ್ದ ಹಾಗೆ, ಸಾಮಾನ್ಯ ಸ್ತ್ರೀಯರು ಪುರುಷನಿಗೆ ತಮ್ಮನ್ನು ಒಪ್ಪಿಸಿಕೊಳ್ಳುವಂತೆ ಅವಳು ಚೆನ್ನನಿಗೆ ಮಾನಸಿಕವಾಗಿ ಒಪ್ಪಿಸಿಕೊಳ್ಳುತ್ತಾಳೆ. ಈ ಅರ್ಥದಲ್ಲಿ ಅವಳು ಪುರುಷ ಪ್ರಧಾನ ಸಮಾಜವನ್ನು ಒಪ್ಪಿಕೊಂಡಿದ್ದಳು. ಆದರೆ ಅಕ್ಕಮಹಾದೇವಿ ಕೌಶಿಕನಿಗೆ ಪ್ರತಿಭಟನೆ ಮಾಡೋಕೆ ಬೆತ್ತಲೆ ಆಗಿರಬಹುದು. ಆದರೆ ಜೀವನ ಪರ್ಯಂತ ಬೆತ್ತಲೆಯಾಗಿ ಬದುಕಿದಳು ಅನ್ನೋ ಪ್ರಶ್ನೆ ನನಗೆ ಬಗೆಹರಿದಿಲ್ಲ

ಬೆತ್ತಲೆ ಅನ್ನೋದು ದೈಹಿಕವಾದ ಅರ್ಥಕ್ಕಿಂತ ತಾತ್ವಿಕವಾದ ಪರಿಕಲ್ಪನೆಯಾಗಿ ನೋಡಬೇಕು ಅನಿಸುತ್ತದೆ. ಅಕ್ಕನ ಕೇಶಾಂಬರೆ ಅನ್ನೋದಕ್ಕೆ ಒಬ್ಬೊಬ್ಬ ಲೇಖಕಿಯರು ಒಂದೊಂದು ಅರ್ಥ ಕೊಡುತ್ತಾರೆ. ಇದೆಲ್ಲಾ ಮುಖ್ಯ ದಿಗಂಬರರಾದವರಿಗೆ ಉಟ್ಟ ಬಟ್ಟೆ ಲಜ್ಜೆಯ ಸಂಕೇತ. ಕಳೆದ ಬಟ್ಟೆ ಆತ್ಮಸ್ಥೈರ್ಯದ ಸಂಕೇತ, ಯಾರು ಕಳಚಿದರು ? ಯಾವಾಗ ಕಳಚಿದರು ? ಇವು ಉತ್ತರವಿಲ್ಲದ ಪ್ರಶ್ನೆಗಳು ಇದರಾಚೆ ಹೋಗಿ, ಈ ಪರಿಕಲ್ಪನೆಯ ಹಿಂದಿರುವಂತಹ ಅವಳ ಆತ್ಮಸ್ಥೈರ್ಯವನ್ನು ಗಮನಿಸಬೇಕು. ಅಕ್ಕ ಎಲ್ಲವನ್ನೂ ತಿರಸ್ಕರಿಸುತ್ತಾಳೆ. ಅನ್ನೋತರಹ ನೋಡಬೇಕಾಗಿಲ್ಲ. ಅವಳು ಪರ್ಯಾಯವಾದ ಒಂದು ಕೌಟುಂಬಿಕ ವ್ಯವಸ್ಥೆಯನ್ನು ಕಟ್ಟಿಕೊಳ್ಳುತ್ತಾಳೆ. ಅಕ್ಕ ಸಮಾಜಮುಖಿಯಾದ ನೆಲೆಯವಳಲ್ಲ ಅನ್ನೋ ಮಾತು ಅಷ್ಟು ನಿಜವಲ್ಲ. ಅವಳಲ್ಲಿ ಗಮನಿಸಬೇಕಾದ ಮುಖ್ಯ ಸಂಗತಿ ಎಂದರೆ, ಈ ಸಮಾಜದ ಅಧಿಕಾರ ಕೇಂದ್ರಗಳೇನಿದಾವೆ ಅವು ಶಿವಾಲಯ ಇರಬಹುದು, ಕುಟುಂಬ ವ್ಯವಸ್ಥೆ ಇರಬಹುದು, ಅವುಗಳ ವಿರುದ್ಧ ಅವಳು ಬೇರೊಂದು ಪರ್ಯಾಯವಾದ, ಚಲನಶೀಲವಾದ ಕಲ್ಪನೆಯನ್ನು ಮೂಡಿಸುತ್ತಾಳೆ. ಅವಳು ಸ್ತ್ರೀಯಾಗಿ ಹುಟ್ಟಿದಾಳೋ ಅಥವಾ ಸ್ತ್ರೀತನವನ್ನು ಕಳಕೊಂಡಿದ್ದಾಳೋ ಚೆನ್ನನಿಗೆ ಸ್ತ್ರೀ ಆಗ್ತಾಳೋ ಅಥವಾ ಚೆನ್ನಮಲ್ಲಿಕಾರ್ಜುನನೇ ಸ್ತ್ರೀಯಾಗಿ ಇವಳು ಪುರುಷ ರೂಪಿಯಾಗ್ತಾಳೋ ? ಈಯೆಲ್ಲಾ ಪ್ರಶ್ನೆಗಳೂ ಸಾಧ್ಯವಿರೋ ಹಾಗೆ, ಒಂದು ಬದಲಿ ಆಗಿರುವಂತಹ ಸಂಬಂಧಗಳನ್ನು ಕಟ್ಟುತ್ತಾಳೆ.

ಒಟ್ಟಾರೆಯಾಗಿ ನಮ್ಮ ಆಧುನಿಕ ಕವಯತ್ರಿಯರು ಹೇಳುವಂತೆ ಸಾಮಾನ್ಯವಾಗಿ ನಾವು ಸ್ತ್ರೀಯರು ಪುರುಷವಾದಿ ದೃಷ್ಟಿಯಿಂದ ಮಾತಾಡುವಾಗ ಏನಾಗಿ ಬಿಡುತ್ತೆ ಅಂದ್ರೆ ಪುರುಷಕೇಂದ್ರಿತ ಸಮಾಜ ಒಬ್ಬ ಮಹಿಳೆಯ ಮೇಲೆ ಹೇಗೆಲ್ಲಾ ಅನ್ಯಾಯ ಮಾಡಿದೆ ? ಪಾಪ ಅವಳು ಹೇಗೆಲ್ಲಾ ಬಲಿಪಶು ಆಗಿದ್ದಾಳೆ ? ಅನ್ನೋದು ಒಂದು ಸುಲಭವಾದ ತಂತ್ರವಾಗಿ ಬಿಡುತ್ತೆ. ಆದರೆ ಆ ದಮನಗಳನ್ನು ಮೀರುವಂತಹ ಉಪಾಯಗಳೂ ಅವರಿಗಿದ್ದವು. ಅವರು ಸಂಘರ್ಷವನ್ನು ಮಾಡಿದರೂ, ಅನ್ನೋದನ್ನ ಮರೆತು ಬಿಡ್ತೀವಿ. ನಮ್ಮಲ್ಲಿ ಬಹಳ ಕಾಲದಿಂದ ನಡೆದು ಬಂದಿರೋ ರಾಜಕೀಯ ಪ್ರಸ್ಥಾನ ಏನಂದ್ರೆ, ಸಂವಿಧಾನದಲ್ಲಿ ಈ ಜಾತಿಧರ್ಮಗಳೆಲ್ಲವನ್ನು ಧಾಟಿಕೊಂಡ, ಸಮಾನತಾ ಸಮಾಜದ ಅಪೇಕ್ಷೆ. ಇದೊಂದು ಕಡೆ ಇದ್ರೆ,

ಇನ್ನೊಂದು ಕಡೆ ಸಮಾಜದಲ್ಲಿ ಜಾತಿಗಳು ಚಾರಿತ್ರಿಕ ವಾಸ್ತವ ಆಗಿರೋದರಿಂದ, ಪ್ರಭುತ್ವವು ಅದರಲ್ಲಿ ಹಸ್ತಕ್ಷೇಪ ಮಾಡಿ ಅವನ್ನು ಒಳಗೊಳ್ಳಬೇಕು. ಈ ರೀತಿಯ ಗುರುತುಗಳು ಇರದಂತೆ ಅಂತಿಮವಾಗಿ ನಾಶವಾಗಬೇಕು ಅನ್ನೋದು ಇದೆ. ಸುಮಾರು ವರ್ಷಗಳಿಂದ ನೋಡುತ್ತಾ ಇದ್ದೇವೆ. ಕೆಳಜಾತಿ ಸಮುದಾಯದಿಂದ ಬಂದ ಶರಣರು ತಮ್ಮ ಕಸುಬು ಮತ್ತು ಉಪಜಾತಿಯ ಗುರುತನ್ನ ಇಟ್ಟುಕೊಂಡು ಭಗ್ನಗೊಳಿಸುವ ಕೆಲಸ ಮಾಡ್ತಾರೆ ಅನ್ನುವುದನ್ನು ನಾವು ಒಪ್ಪುತ್ತೇವೆ. ಅಕ್ಕ ಬದುಕಿನ ಪ್ರಯಾಣದಲ್ಲಿ ಮಾಡಿದ ಎಲ್ಲಾ ಹುಡುಕಾಟಗಳೂ ಸಾಮಾಜಿಕವೇ ಇವನ್ನು ಇಡೀ ಮಾನವಕುಲದ ಸಮಾನತೆಯ ಪ್ರಶ್ನೆಯನ್ನಾಗಿ ನೋಡೋದಕ್ಕೆ ಸಾಧ್ಯವಿದೆ. ಅಕ್ಕನ ವಚನಗಳಿಗೆ ಒಂದು ಉಚಿತವಾದ, ಇಂತಹದೇ ಎನ್ನುವ ಅರ್ಥವಿದೆ. ಅದನ್ನು ಹಿಡೀಬೇಕು ಅನ್ನೋ ನಂಬಿಕೆಯಿಂದ ಚಾರಿತ್ರಿಕ ಶೋಧದ ಪ್ರಶ್ನೆಗಳು ಹುಟ್ಟುತ್ತವೆ ಅನಿಸುತ್ತದೆ. ಅಕ್ಕನ ವಚನಗಳಿಗೆ ಇರೋ ನಿಜವಾದ, ಸರ್ವಸಮ್ಮತವಾದ ಅರ್ಥವೇನು ? ಅನ್ನುವುದನ್ನು ಉತ್ತರಿಸುವುದು ಸುಲಭವಲ್ಲ.

ಆಧುನಿಕ ಸ್ತ್ರೀಪರ ಲೇಖಕರು ಮತ್ತು ಲೇಖಕಿಯರು ಕಂಡರಿಸಿರುವ ಅಕ್ಕಮಹಾದೇವಿಯ ಚಿತ್ರಗಳು ಎಲ್ಲವೂ ಒಂದೇ ಅಲ್ಲ. ಈ ಎಲ್ಲಾ ಚಿತ್ರಗಳು ಏನಿವೆ ಇವು ಕರ್ನಾಟಕ ಸಂಸ್ಕೃತಿ. ಆಕೆಯನ್ನು ಅನುಸಂಧಾನ ಮಾಡಿರುವ ವಿವಿಧ ಬಗೆಗಳನ್ನು ಸೂಚಿಸುತ್ತಾ ಇವೆ. ಕವಯತ್ರಿಯರ ಅಧ್ಯಯನಗಳು ಒಂದೊಂದು ಮಾದರಿಯಲ್ಲಿ ಒಂದೊಂದು ಅಧ್ಯಯನಗಳು ಇವೆ. ಅದಕ್ಕಾಗಿ ಯಾವುದು ಮೇಲು ? ಯಾವುದು ಕೀಳು ? ಅನ್ನಲಾಗುವುದಿಲ್ಲ. ಒಟ್ಟಾರೆ ಅಕ್ಕನ ಕುರಿತ ಅಧ್ಯಯನಗಳನ್ನು ಕವಯತ್ರಿಯರು ಮಾಡಿರುವುದನ್ನು ಗಮನಿಸಬಹುದು.

* * *

ಅಕ್ಕಮಹಾದೇವಿ ವಚನಗಳನ್ನಷ್ಟೇ ರಚಿಸಲಿಲ್ಲ. ಯೋಗಾಂಗ ತ್ರಿವಿಧಿ ಸ್ವರವಚನಗಳು, ಸೃಷ್ಟಿಯ ವಚನಗಳನ್ನೂ ರಚಿಸಿದ್ದಾಳೆ. ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಪ್ರಪ್ರಥಮ ಗಮನಾರ್ಹ ಮಹಿಳಾ ಕವಯತ್ರಿ ಎನಿಸಿಕೊಂಡಿದ್ದಾಳೆ. ತಾನು ಬದುಕಿದ್ದ ಕಾಲದಲ್ಲಿಯೇ ತನ್ನ ಸಮಕಾಲೀನ ವಚನಕಾರರಿಂದಲೇ ಶ್ರೇಷ್ಠ ವಚನಕಾರ್ತಿ ಎಂದು ಕರೆಸಿಕೊಂಡಿದ್ದಾಳೆ. ಅಕ್ಕ ವಚನಗಳಿಗೆ ಬಳಸಿಕೊಂಡ ಭಾಷೆ ತೀರ ಸರಳ. ಆದರೆ ಭಾವ ತುಂಬಿಕೊಂಡಿರುವಂತಹವು. ಅಭಾವಪೂರ್ಣತೆ ವೈಯಕ್ತಿಕ ಅನುಭವದ ಪ್ರಕಟವಾದರೂ, ಸಮಾಜ ಲೋಕ ಚಿಂತನೆಯನ್ನು ಒಳಗೊಂಡಿದೆ. ಆ ಮೂಲಕವಾಗಿ, ಧರ್ಮ ಪಥದ ಅವಳ ನಡೆನುಡಿ – ಪ್ರಕೃತಿಯಲ್ಲಿಯೂ ಅನಂತವನ್ನೂ, ದರ್ಶನ ಮಾಡಿಸಿದೆ. ಆಕೆಯ ಭಾವ ತೀವ್ರತೆಯಲ್ಲಿ ಸಮಾಜದ ವಾಸ್ತವತೆ ಪ್ರಕಟವಾಗಿದೆ. ಹೆಣ್ತನದ ನೋವು – ನಲಿವು ಆದರೂ ಎದೆಗುಂದದ ಚಿತ್ತಸ್ಥೈರಣೆಯೇ ಅವಳ ಕಾವ್ಯಾತ್ಮಕ ಸೌಂದರ್ಯಕ್ಕೆ ಮತ್ತಷ್ಟು ಮೆರುಗನ್ನು ತಂದುಕೊಡಲು ಸಾಧ್ಯವಾಗಿದೆ. ಆಕೆಯ ಚರಿತ್ರೆಯನ್ನು ನಾನು ಈ ಕೃತಿಯಲ್ಲಿ ಆಕೆಯ ಕಾವ್ಯಮಯವಾದ ವಚನಗಳಿಂದಲೇ ಕಟ್ಟಿಕೊಟ್ಟಿರುವುದರಿಂದ ಅದನ್ನೇ ಮತ್ತೇ ಇಲ್ಲಿ ಪುನರಾವೃತ್ತಿ ಮಾಡಲಾರೆ. ಆಧ್ಯಾತ್ಮಿಕ ಸಾಮಾನ್ಯ ಜೀವನದ ಔನ್ನತ್ಯಗಲೆರಡೂ ಅಕ್ಕನ ವಚನಗಳಲ್ಲಿವೆ. ಅಕ್ಕ ನಿತ್ಯ ಜೀವನದಲ್ಲಿ ಬಳಸಬಹುದಾದ ವ್ಯವಹಾರಿಕ ಭಾಷೆಯನ್ನು ವೈಧಿಕ ಪೂರ್ಣವಾಗಿ ಬಳಸಿಕೊಂಡಿದ್ದಾಳೆ. ಇದುವೇ ಆಕೆಯ ವಚನಗಳ ಬಹುದೊಡ್ಡ ಸಂಪತ್ತೂ ಕೂಡಾ ಆಗಿದೆ. ಜನಪದರ ಅನುಭವದ ಮಾತುಗಳು ಬಳಕೆಯಾಗಿವೆ. ಗಂಡನ ಮನೆಯ ಕೆಲಸದಲ್ಲಿಯೇ ಇಡೀ ದಿನಕಳೆದ ಗರತಿಗೆ' ಬೆಳದಿಂಗಳು ಬಿಸಿಲಾಗಿ ಕಂಡಂತೆ, ಅಕ್ಕಮಹಾದೇವಿಗೆ ಚೆನ್ನಮಲ್ಲಿಕಾರ್ಜುನನ್ನು ಕೂಲಡುವ ತವಕದಲ್ಲಿ ಈ ಅನುಭವವಾಗಿದೆ. ಬೀಸುವ ಗಾಳಿ, ಉರಿಯಾಗಿ, ಬೆಳದಿಂಗಳು ಬಿಸಿಲಾಗಿ ಕಂಡಿವೆ. ಕಾವ್ಯ ರಚನೆಯ ಉದ್ದೇಶ ವಚನಕಾರರದಾಗಿರಲಿಲ್ಲ. ಸಹಜವಾಗಿಯೇ ಅಲಂಕಾರ, ಛಂದಸ್ಸು, ಭಾವದೊಂದಿಗೆ ಮೂಡಿಬಂದಿರುವುದನ್ನು ಕಾಣುತ್ತೇವೆ. ಬಂಜೆ ಬೇನೆಯನರಿಯಳು, ಮಿಂಡಿ ದುಃಖ ಅರಿಯಳೆಂಬುದು ಗಾದೆ, ಇದು ಅಕ್ಕಮಹಾದೇವಿಯಲ್ಲಿ ಬಂಜೆ ಬೇನೆಯನರಿಯಳು ಬಲದಾಯಿ ಮುದ್ದ ಬಲ್ಲಳೆ ? ಎಂದು ಬರುತ್ತದೆ. ಹೀಗೆ ಇನ್ನೂ ಹಲವಾರು ಗಾದೆಗಳ ಪಟ್ಟಿಕೊಡಬಹುದು, ಒಡಪುಗಳನ್ನೂ ನೋಡಬಹುದು.

ತ್ರಿವಿದಿಗಳನ್ನೊಳಗೊಂಡ ಅಕ್ಕಮಹಾದೇವಿಯ ಯೋಗಾಂಗ ತ್ರಿವಿಧಿ ತೀರಾ ಚಿಕ್ಕದಾದರೂ ಸತ್ವದಲ್ಲಿ ಹಿರಿದು. ಪ್ರಾಚೀನ ಕಾಲದಿಂದ ಬಂದ ಯೋಗ ಸಾಧನೆಯನ್ನು ಪ್ರಶ್ನಿಸುವ ಅಕ್ಕ 'ಯೋಗಾಂಗ ತ್ರಿವಿಧಿ'ಯೆಂದು ಬರೆದಿರುವ ಆಶ್ಚರ್ಯ. ಆದರೆ ಇಲ್ಲಿ ಆಕೆ ಲಿಂಗಾಂಗ ಯೋಗದ ಬಗ್ಗೆ ಲಿಂಗಾಂಗ ಸಮರಸಾನಂದದ ಬಗ್ಗೆ ಹೇಳುತ್ತಾಳೆಯೇ ಹೊರತು ಉಳಿದ ಯೋಗಗಳ ಕುರಿತಲ್ಲವೆಂಬುದು ಗಮನಾರ್ಹ.

ವೀರಶೈವ ಧರ್ಮದ ತಾತ್ವಿಕ ಚಿಂತನೆಯ ಹಿನ್ನೆಲೆಯಲ್ಲಿ ಸೃಷ್ಟಿಯ ಮೂಲವನ್ನು ತಿಳಿಸುವ ಪ್ರಯತ್ನವನ್ನು ಆಧುನಿಕ ಕವಯತ್ರಿಯರು ಇಲ್ಲಿ ಮಾಡಿದ್ದಾರೆ. ಸಾಹಿತ್ಯ ಸೃಷ್ಟಿಯಲ್ಲಿಯ

ಅಕ್ಕಮಹಾದೇವಿಯ ಸಾಧನೆ ಅಪರೂಪದು ಗಮನಾರ್ಹವಾದದ್ದು. ಆಕೆಗೆ ಆಕೆಯೇ ನಿದರ್ಶನಳು.

ಆಧುನಿಕ ಲೇಖಕಿಯರು ಅಕ್ಕನನ್ನು ಕುರಿತು ಅಧ್ಯಯನಗಳನ್ನು ನಡೆಸಿದಾರೆ. ಆದರೆ ಅಕ್ಕ ಉಡುತಡಿಯಲ್ಲಿ ಉದ್ಭವಿಸಿ, ಕಲ್ಯಾಣದಲ್ಲಿ ಕವಲೊಡೆದು ಕನ್ನಡ ನಾಡಿನ ಹೊಲ ಮೇರೆಯನ್ನೆಲ್ಲಾ ಕ್ಷಣಾರ್ಧದಲ್ಲಿ ಪ್ರಜ್ವಲಿಸುವಂತೆ ಮಾಡಿ ಶ್ರೀ ಶೈಲದ ಕದಳಿಯಲ್ಲಿ ಕಣ್ಮರೆಯಾದ ಅಕ್ಕಮಹಾದೇವಿಯ ದಿವ್ಯಾತ್ಮದ ಸೆಳೆಮಿಂಚಿನ ಹೆಜ್ಜೆ ಗುರುತುಗಳನ್ನು ಕಂಡುಕೊಂಡು ಆ ಜ್ಯೋತಿಮಾರ್ಗದಲ್ಲಿ ಅಡಿಯಿಡುವ ಪ್ರಜ್ಞೆಯನ್ನು ನಿಷ್ಠೆಯನ್ನು ಕರ್ನಾಟಕ ಜನಪದ ಪಡೆಯಬೇಕು.

ಮಹಾದೇವಿಯಕ್ಕ ಕನ್ನಡನಾಡಿನ ಮಹಾಶಿವಶರಣೆ. ಮೊದಲ ಕವಯಿತ್ರಿ, ವೀರರಾಗಿಣಿ. ಅನುಭವದ ಆಳದಿಂದ ಹೊರಹೊಮ್ಮಿದ ವಚನಗಳು ಉತ್ತಮ ಕಾವ್ಯಾಂಶದಿಂದ ತುಂಬಿ ತುಳುಕುತ್ತಿವೆ. ಅವಳ ಚರಿತ್ರೆಯಂತೂ ಆದರ್ಶಪ್ರಾಯವಾಗಿದೆ. ಜಾಗತಿಕ ಮಹಿಳಾಮಣಿಗಳಲ್ಲಿ ಅತ್ಯಂತ ಹಿರಿಯಸ್ಥಾನ ಆಕೆಯದು. ಅನುಭವಿ ಅಕ್ಕಮಹಾದೇವಿಯ ವಿಶ್ವವ್ಯಾಪಕ ವ್ಯಕ್ತಿತ್ವ ಆಕಾಶದಂತೆ ಅಪರಂಪಾರವಾದುದು. ಸಾಗರದಂತೆ ನಿಗೂಢವಾದುದು, ಅರಿತಷ್ಟು ಅರ್ಥವ್ಯಾಪ್ತಿಯನ್ನು ಹಿಗ್ಗಿಸಿಕೊಳ್ಳುತ್ತಾ ಹೋಗುವ ದರ್ಶನ ವೈಭವವುಳ್ಳದ್ದು. ಕರುನಾಡ ಕಾಸಾರದಲ್ಲಿ ತಿಳಿಬಾಳಿನ ತಾವರೆಯಾಗಿ ಆಧ್ಯಾತ್ಮದ ಅರವಿಂದವಾಗಿ ಅರಳಿದಳಾಕೆ. ಸುತ್ತ ಸೌರಭವನ್ನು ಬೀರಿ ತಾವರೆಯಷ್ಟೆ ನಿರ್ಮಲವಾದ ಪರಿಶುದ್ಧವಾದ ಬಾಳನ್ನು ಬಾಳ ಬಯಲಾದವಳು ಸ್ವಾನುಭವದ ಉದಯದಿಂದ ತನ್ನ ತಾನರಿದು ನಿಜಶಕ್ತಿಯಾದಳಾಕೆ.

ಮಹಾದೇವಿಯಕ್ಕನ ಜೀವನ ಚರಿತ್ರೆ ಹೆಣ್ಣಿನ ಗೌರವ ಸಾಧನೆಯ ಹೆಣ್ಣಿನ ಸ್ವಾತಂತ್ರ್ಯ ಸಾಧನೆಯ, ಹೆಣ್ಣಿನ ಪರಮಾರ್ಥ ಸಾಧನೆಯ ಒಂದು ಮಹಾಪ್ರಕರಣ. ಮಹಾದೇವಿಯಕ್ಕನು ಆ ಕಾಲದ ಸ್ತ್ರೀಯ ಸ್ಥೈರ್ಯದ ಸಂಕೇತವಾಗಿದ್ದಾಳೆ. ಸ್ತ್ರೀಗಳಿಸಿದ ಸಾಧನೆಯ ಪ್ರತೀಕವಾಗಿದ್ದಾಳೆ. ಸ್ತ್ರೀಸಂಕಲ್ಪ ಶಕ್ತಿಯ ಸಾಕಾರಳಾಗಿದ್ದಾಳೆ. ಸಾಮಾಜಿಕ ಸ್ತರದಲ್ಲಿಯೂ ಅವಳು ಎದುರು ಹಾಕಿಕೊಂಡದ್ದು ಬಲಿಷ್ಟ ವ್ಯಕ್ತಿಯನ್ನು ಅಧಿಕಾರಶಾಹಿಯನ್ನೇ ಎದುರಿಸಿದ ಆಕೆಯ ಕೆಚ್ಚು ಒಂದು ಬಗೆಯಲ್ಲಿ ಎಲ್ಲಾ ಶರಣರ ನೈತಿಕ ಸ್ಥೈರ್ಯವನ್ನು ಪ್ರತೀಕಿಸುತ್ತದೆ. ಮಹಾದೇವಿ ಸ್ತ್ರೀಯಾಗಿ ಸ್ತ್ರೀತ್ವವನ್ನು ಮೀರಿ ನಿಂತಿದ್ದುದು ಒಂದು ವಿಶೇಷ. ಈ ಧೋರಣೆ ಈಚೆಗೆ ಹೆಚ್ಚು ಜನಪ್ರಿಯವಾಗಿದೆ. ಆದರೆ ವಚನಕಾರರ ಆಧ್ಯಾತ್ಮಿಕ ಚಳುವಳಿಯ ಒಂದು ತಾತ್ವಿಕ ನೆಲೆಯಲ್ಲಿ ತನ್ನ ಸ್ತ್ರೀತ್ವವನ್ನು ಆಕೆ ಮೀರಿದ್ದು ನಿಜ. ಆದರೆ ಮಹಾದೇವಿಯಕ್ಕ ಸಂಪ್ರದಾಯಸ್ಥ ಸಾಮಾಜಿಕ ರೀತಿ – ನೀತಿಗಳಿಗೆ, ರೂಢಿಗತವಾದ ಚಿಂತನೆಗೆ ಸ್ವತಃ ಒಂದು ಸವಾಲಾದವಳು. ಆ ದಿಕ್ಕುಗಳಿಂದ ತೀವ್ರ ವಿರೋಧ, ನಿಂದೆ, ಕಷ್ಟಗಳನ್ನು ಹೆಣ್ಣಾಗಿಯೇ ಎದುರಿಸಿದಳು. ಅವಳ ನುಡಿಗಳಲ್ಲಿ ನೋವು, ದ್ವಂದ್ವ, ತಾಕಲಾಟಗಳಿದ್ದರೂ, ಅವು ಮಾನವೀಯ ಸಹಜ ಪ್ರತಿಕ್ರಿಯೆಗಳಷ್ಟೇ ಅಂತಿಮವಾಗಿ ಮನದ ಮುಂದೆ ನಿಲ್ಲುವ ಚಿತ್ರ ನಮ್ರತೆಯತ್ತ ಹಂತ ಹಂತವಾಗಿ ಸಾಗಿ ಅದನ್ನು ಸಾಧಿಸಿದ ವೀರ

ವಿರಾಗಿಣಿಯದೇ ಆಗಿದೆ. ಸಮಕಾಲೀನ ಸಂದರ್ಭದಲ್ಲಿ ಆಕೆ ಮುಖ್ಯಳಾಗುವುದು ಪರಂಪರೆಯ ಒಳಸುಳಿಗಳ ನಡುವೆಯೂ, ಕಾಲಾತೀತವಾಗಿ ಉಳಿದುಬಂದಿರುವ ಆಕೆಯ ವ್ಯಕ್ತಿತ್ವದ ಸತ್ವಪೂರ್ಣ ಅಂಶಗಳಿಗಾಗಿ, ಬದುಕಿನ ಎದುರಲ್ಲಿ ಆಕೆ ತನ್ನನ್ನು ಒಡ್ಡಿಕೊಂಡ ರೀತಿಯಲ್ಲಿ, ತನ್ನತನವನ್ನು ಗುರುತಿಸಿ, ಸಾಧಿಸಿರುವ ಅಂಶದಲ್ಲಿ ಮತ್ತು ಉತ್ಕೃಷ್ಟವಾದ ಸಾಹಿತ್ಯ ಗುಣಗಳೊಂದಿಗೆ ತನ್ನ ಅನುಭವವನ್ನು ಅಭಿವ್ಯಕ್ತಿಗೊಳಿಸಿರುವ ಬಗೆಯಲ್ಲಿ ಆಕೆಯ ಅನನ್ಯತೆಯು ಅಪರೂಪದ, ಹರಿಹರನಿಂದ ಇವತ್ತಿನವರೆಗೆ ಮಹಾದೇವಿಯಕ್ಕನ ಬದುಕು ನೂರಾರು ಜನ ಕವಿ – ಕವಯತ್ರಿಯರು, ವಿಮರ್ಶಕರು, ಸಾಹಿತಿಗಳು, ಚಿಂತಕರು, ಸಂಶೋಧಕರನ್ನು ವಿಚಾರಕ್ಕೆ ಪ್ರೇರೇಪಿಸುತ್ತಾ ಬಂದಿರುವುದು ಆಕೆಯ ವ್ಯಕ್ತಿತ್ವದ ಘನತೆಗೆ ಹಿಡಿದ ಕನ್ನಡಿ ಎನ್ನಬಹುದು.

ಇಲ್ಲಿ ಹಾಸುಹೊಕ್ಕಾಗಿರುವ ಅಸಮಾನತೆಯ ಕುರೂಪಿ ಅಂಶಗಳಿಗೆ ಮೂಲವಾದ ಪರಿಸ್ಥಿತಿಗಳನ್ನು ಬದಲಾಯಿಸಬಯಸುವ ಮತ್ತು ಇಹದೊಳಗೇ ಪ್ರೀತಿ, ವಿಶ್ವಾಸ, ಅಂತಃಕರಣ ತುಂಬಿದ ಪರ್ಯಾಯ ವ್ಯವಸ್ಥೆಯನ್ನು ಕಟ್ಟಲು ಬಯಸುವ ಆಧುನಿಕ ಸ್ತ್ರೀ ಸಂವೇದನೆಗೆ ಅಕ್ಕಮಹಾದೇವಿಯೇ ಮಾದರಿ, ಯಾವ ರೀತಿ ಅರ್ಥಪೂರ್ಣವಾದೀತು ? ಎಂಬುದನ್ನು ಗಮನಿಸಬೇಕು. ಆಕೆಯ ವೈರಾಗ್ಯದಲ್ಲಿ ತಮ್ಮ ಮಾದರಿ ಕಾಣುವವರು ಬೇಕಾದರೆ ಆ ದಿಕ್ಕನ್ನು ಅರಸಲಿ, ಆದರೆ ಬದುಕಿನ ಎಲ್ಲಾ ಮಾನವೀಯ ಸಂಬಂಧಗಳ ಅರ್ಥಪೂರ್ಣತೆಗಾಗಿ ಬಯಸುವವರಿಗೆ ಅಕ್ಕನ ದಿಟ್ಟತನ, ಅನುಭವಕ್ಕೆ ಆಕೆ ತನ್ನನ್ನು ಒಡ್ಡಿಕೊಂಡ ಧೀರತೆ, ಅಭಿವ್ಯಕ್ತಿಯಲ್ಲಿನ ಪ್ರಾಮಾಣಿಕತೆಗಳೂ, ಆಕೆಯ ಆತ್ಮಶೋಧನಾಗುಣವೂ ನಿಜವಾಗಿ ಮಾದರಿಯಾಗಬಲ್ಲವು.

* * *

# ಗ್ರಂಥಋಣ


೧ ಡಾ॥ ಎಂ.ಎಸ್. ಆಶಾದೇವಿ — "ವಚನಪ್ರವೇಶ"
ಅಕ್ಷರ ಪ್ರಕಾಶನ ಹೆಗ್ಗೋಡು (ಸಾಗರ)
ಕರ್ನಾಟಕ

೨ ಕಮಲಾ ಹಂಪನಾ — "ಅಕ್ಕಮಹಾದೇವಿ"
ಕರ್ನಾಟಕ ಬುಕ್ ಏಜೆನ್ಸಿ
ತುಂಗಾ ಕಾಂಪ್ಲೆಕ್ಸ್, ಗಾಂಧಿನಗರ
ಬೆಂಗಳೂರು – ೫೬೦ ೦೦೯

೩ ಬಿ. ಜನಾರ್ಧನ ಭಟ್ — "ಸಾಹಿತ್ಯ ವಿಮರ್ಶೆ"
ಕರ್ನಾಟಕ ಸಾಹಿತ್ಯ ಅಕಾಡೆಮಿ
ಕನ್ನಡ ಭವನ, ಜೆ.ಸಿ ರಸ್ತೆ
ಬೆಂಗಳೂರು

೪ ಡಾ॥ ಜ್ಯೋತಿ ಶಶಿಕುಮಾರ್ — "ಮಹಿಳಾ ಸಾಮಾಜಿಕತೆ "
ಮಹಿಳಾ ಅಧ್ಯಯನ ಕೇಂದ್ರ ಕನ್ನಡ
ವಿಶ್ವವಿದ್ಯಾಲಯ,
ಹಂಪಿ

೫ ಡಾ॥ ಜಯಶ್ರೀ ದಂಡೆ — "ಅಕ್ಕಮಹಾದೇವಿ"
ಕಲ್ಯಾಣನಾಡಿನದ ಶರಣ ಪರಿಷತ್ತು
ಅನುಭವ ಮಂಟಪ
ಬಸವಕಲ್ಯಾಣ, ಬೀದರ್‌ಜಿಲ್ಲೆ

೬ ಪರಿಮಳ ಗುಂಜಾಳ — "ಅಕ್ಕಮಹಾದೇವಿ"
ಎಮ್.ಎರಸ. ಶಾಬಾದಿಮಠ ಬುಕ್ ಡಿಪೊ
ಪೋಸ್ಟ್ ಬಾಕ್ಸ್ ನಂ. ೬೫, ಸ್ಟೇಶನ್ ರೋಡ್
ಗದಗ – ೫೮೨೧೦೧

೭ ಪ್ರಭುಶಂಕರ — "ಬೆರಗು"
ಕನ್ನಡ ಮತ್ತು ಸಂಸ್ಕೃತಿ ಇಲಾಖೆ
ಕನ್ನಡ ಭವನ, ಜೆ.ಸಿ. ರಸ್ತೆ
ಬೆಂಗಳೂರು – ೫೬೦ ೦೦೨

| | | |
|---|---|---|
| ೮ | ಡಾ॥ ಪ್ರಭುಶಂಕರ | "ಶರಣದ ನೂರೊಂದು ವಚನಗಳು"<br>ಡಿ.ವಿ.ಕೆ. ಮೂರ್ತಿ<br>ಪ್ರಕಾಶಕರು ಮೈಸೂರು – ೫೭೦ ೦೦೪ |
| ೯ | ಡಾ॥ ಎಲ್ ಬಸವರಾಜು | "ಅಕ್ಕನ ವಚನಗಳು"<br>ಗೀತಾ ಬುಕ್ ಹೌಸ್ ಪ್ರಕಾಶಕರು<br>ಮೈಸೂರು |
| ೧೦ | ಮಾತಾಜಿ | "ಹೆಪ್ಪಿಟ್ಟ ಹಾಲು"<br>ಸುಯಿಧಾನ ಸುಗ್ರಂಥಮಾಲೆ<br>ವಿಶ್ವಕಲ್ಯಾಣ ಮಿಷನ್, ಬಸವಮಂಟಪ<br>ಕಾರ್ಡ್ ರಸ್ತೆ ೨ನೇ ಬ್ಲಾಕ್ ರಾಜಾಜಿನಗರ<br>ಬೆಂಗಳೂರು – ೫೬೦ ೦೧೦ |
| ೧೧ | ಡಾ॥ ಎಚ್ ಎಸ್ ಶ್ರೀಮತಿ | "ಸ್ತ್ರೀವಾದ"<br>ಪ್ರಸಾರಾಂಗ<br>ಕನ್ನಡ ವಿಶ್ವವಿದ್ಯಾಲಯ, ಹಂಪಿ |
| ೧೨ | ಡಾ॥ ಎಚ್ ಎಸ್ ಶ್ರೀಮತಿ | "ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ"<br>ಪ್ರಸಾರಾಂಗ<br>ಕನ್ನಡ ವಿಶ್ವವಿದ್ಯಾಲಯ, ಹಂಪಿ |
| ೧೩ | ಡಾ॥ ಎಚ್ ಎಸ್ ಶ್ರೀಮತಿ | "ದ ಸೆಕೆಂಡ್ ಸೆಕ್ಸ್"<br>ಅಧ್ಯಯನ ಮಂಡಲ<br>ಬೆಂಗಳೂರು |
| ೧೪ | ಎಚ್. ದಂಡಪ್ಪ<br>ಬಿ ಎಸ್ ಸುಮಿತ್ರಾಬಾಯಿ | "ಸುವರ್ಣ ಸಾಹಿತ್ಯ ವಿಮರ್ಶೆ"<br>ಕನ್ನಡ ಮತ್ತು ಸಂಸ್ಕೃತಿ ಇಲಾಖೆ<br>ಕನ್ನಡ ಭವನ ಜೆ.ಸಿ. ರಸ್ತೆ<br>ಬೆಂಗಳೂರು – ೫೬೦ ೦೦೨ |
| ೧೫ | ರಹಮತ್ ತರೀಕೆರೆ | "ಅಕ್ಕಮಹಾದೇವಿ ವಚನಗಳು"<br>ಪ್ರಸಾರಾಂಗ<br>ಕನ್ನಡ ವಿಶ್ವವಿದ್ಯಾಲಯ, ಹಂಪಿ |

| | | |
|---|---|---|
| ೧೬ | ಶ್ರೀಮತಿ ಲೀಲಾದೇವಿ ಆರ್ ಪ್ರಸಾದ್ | "ಅಕ್ಕಮಹಾದೇವಿ"<br>ಬಸವ ಸಮಿತಿ<br>ಬಸವ ಭವನ, ಶ್ರೀ ಬಸವೇಶ್ವರ ವೃತ್ತ<br>ಬೆಂಗಳೂರು – ೫೬೦ ೦೦೧ |
| ೧೭ | ಡಾ॥ ವಿಜಯಾ ಸುಬ್ಬರಾಜ್ | "ಅಕ್ಕಮಹಾದೇವಿಯ ವಚನಗಳಲ್ಲಿ ಪ್ರತಿಭಟನೆ ಮತ್ತು ಅನುಭಾವ"<br>ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ<br>ಬೆಂಗಳೂರು |
| ೧೮ | ವಿವಿಧ ಲೇಖಕರು | "ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆಯ ಸ್ವರೂಪ"<br>ಕರ್ನಾಟಕ ಸಾಹಿತ್ಯ ಅಕಾಡೆಮಿ<br>ಕನ್ನಡ ಭವನ, ಜೆ.ಸಿ. ರಸ್ತೆ<br>ಬೆಂಗಲೂರು – ೫೬೦ ೦೦೨ |
| ೧೯ | ವಾಣಿಶ್ರೀ ಎಸ್ ಪಾಟೀಲ | "ಶಿವಶರಣೆಯರು"<br>ಶಾಬಾದಿಮಠ ಬುಕ್ ಡಿಪೋ<br>ಸ್ಟೇಶನ್ ರೋಡ್, ಗದಗ – ೫೮೨೧೦೧ |
| ೨೦ | ಡಾ॥ ಬಿ.ಎಸ್. ಸುಮಿತ್ರಾಬಾಯಿ | "ಸ್ತ್ರೀ ವಾದ"<br>ಕರ್ನಾಟಕ ಸಾಹಿತ್ಯ ಅಕಾಡೆಮಿ<br>ಕನ್ನಡ ಭವನ, ಜೆ.ಸಿ. ರಸ್ತೆ.<br>ಬೆಂಗಳೂರು – ೫೬೦ ೦೦೨ |
| ೨೧ | ಪಿ ಎಚ್ ಸುಮಿತ್ರ | ಕೃಷಿ ವಿಕಾಸ್ ಪಬ್ಲಿಕೇಷನ್ಸ್<br>ಬೆಂಗಳೂರು |
| ೨೨ | ಡಾ॥ ಸಿ. ಸೋಮಶೇಖರ್ | "ವಚನಗಳಲ್ಲಿ ಸಾಮಾಜಿಕ ಚಿಂತನೆ" |
| ೨೩ | ಡಾ॥ ಬಿ ಎಸ್ ಸುಮಿತ್ರಾಬಾಯಿ | "ಅಕ್ಕಮಹಾದೇವಿ"<br>ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು<br>ಮೈಸೂರು |

| | | |
|---|---|---|
| ೨೪ | ಶ್ರೀ ಹಾಲೇಶ ಮೇಟಿ | "ಶ್ರೀ ಅಕ್ಕಮಹಾದೇವಿಯ ಅಮೃತವಾಣಿ"<br>ಶಾಬಾದಿ ಮಠ ಬುಕ್ ಡಿಪೊ<br>ಸ್ಟೇಶನ್ ರೋಡ್,<br>ಗದಗ – ೫೮೨ ೧೦೧ |
| ೨೫ | ಜಿ ಎಸ್ ಶಿವರುದ್ರಪ್ಪ | "ಕನ್ನಡ ಸಾಹಿತ್ಯ ಸಮೀಕ್ಷೆ"<br>ತಳುಕಿನ ವೆಂಕಣ್ಣಯ್ಯ ಸ್ಮಾರಕ<br>ಗ್ರಂಥಮಾಲೆ, ಗೋಕುಲಂ ೩ನೇ ಹಂತ<br>ಮೈಸೂರು – ೫೭೦ ೦೦೨ |
| ೨೬ | ಕಸ್ತೂರಿ | "ಅಕ್ಕಮಹಾದೇವಿ ವಚನಗಳು"<br>ಸ್ಟೂಡೆಂಟ್ ಬುಕ್ ಹೌಸ್<br>ಬಿ.ಸಿ. ರೋಡ್, ಮಂಗಳೂರು – ೫೭೪೨೧೯ |

